



# ನಮ್ಮ ಕಾನೂನುಗಳು

## 5 ಹಿಂದು ವಿವಾಹ ಕಾನೂನು
## ಆಸ್ತಿಯ ಹಕ್ಕು

# ಮಹಿಳೆಯ ಹಕ್ಕುಗಳು

ಪ್ರಕಾಶಕರು
ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ
ಹಾಗೂ
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಕರ್ನಾಟಕ ಸರಕಾರ
ಇವರಿಗಾಗಿ,
**ಕವಿ ಕಾವ್ಯ ಟ್ರಸ್ಟ್, ಹೆಗ್ಗೋಡು**
1993, ಡಿಸೆಂಬರ್.

**ಮೂಲ ಪ್ರಕಾಶಕರು**
ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ
ಇವರಿಗೆ
ಮಾರ್ಗ್ ತಂಡದವರಿಂದ

ಕನ್ನಡ ಅವತರಣಿಕೆಯ ಪ್ರಕಾಶನವನ್ನು
ಸಾಧ್ಯವಾಗಿಸಿದ **UNICEF** ಸಂಸ್ಥೆಯ ನೆರವನ್ನು
ಗೌರವದಿಂದ ನೆನೆಯುತ್ತೇವೆ.



**ಮುಖಪುಟ**
ಪ್ರಸನ್ನ

**ಪುಸ್ತಕ ವಿನ್ಯಾಸ**
...ನ್ರ ಸಿಸ್ಟಮ್ಸ್, ಹೆಗ್ಗೋಡು

**ಸಂಪಾದನೆ**
...ಭ ಸಿಂಘಲ್ ಜೋಶಿ

**ಸಹಾಯ**
ಜ್ಯೋತಿ ಗುಪ್ತ, ಸೀಮ ಮಿಶ್ರ, ಕಮಲೇಶ ಕುಮಾರಿ

**ಅಕ್ಷರ ಜೋಡಣೆ**
ವಾಗರ್ಥ ಪ್ರಿಂಟಾನಿಕ್ಸ್, ಬೆಂಗಳೂರು

ಮುದ್ರಕರು
**ರಾಜ ಪ್ರಿಂಟರ್ಸ್**
ಬೆಂಗಳೂರು – 560 027
ದೂರವಾಣಿ : 2234066





ಎಂ. ವೀರಪ್ಪ ಮೊಯಿಲಿ
ಮುಖ್ಯ ಮಂತ್ರಿ




27, ನವೆಂಬರ್, 93.
ಬೆಂಗಳೂರು - 560001.

## ಸಂದೇಶ

ಮಹಿಳೆಯರ ಹಕ್ಕುಗಳನ್ನು ಕುರಿತ ಈ ಪುಸ್ತಕಮಾಲಿಕೆಯನ್ನು ಕನ್ನಡದ ಜನ[illegible] ಅರ್ಪಿಸಲಿಕ್ಕೆ ನನಗೆ ತುಂಬ ಹೆಮ್ಮೆ ಎನ್ನಿಸುತ್ತಿದೆ. ದುಡಿಯುವ ಮಹಿಳೆಯರು, ಗ್ರಾಮೀಣ ಮಹಿಳೆಯರು ಹಾಗೂ ಕೆಳವರ್ಗಗಳನ್ನು ಗಂಭೀರ ಸಮಸ್ಯೆಗಳು ಕಾಡುತ್ತಿವೆ. ಅವರು ಸಾಮಾಜಿಕವಾಗಿ ತುಳಿತಕ್ಕೆ ಒಳಗಾಗಿದ್ದಾರೆ. ಕಾರ್ಮಿಕಳಾಗಿ, ಜೀತದಾಳಾಗಿ, ಮದುವೆಯಲ್ಲಿ, ವಿಚ್ಛೇದನದಲ್ಲಿ, ಆಸ್ತಿ ಹಕ್ಕಿನಲ್ಲಿ, ಕೋರ್ಟಿನಲ್ಲಿ, ಠಾಣೆಗಳಲ್ಲಿ, ಆಕೆ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾಳೆ. ಅನೇಕರು ಅತ್ಯಾಚಾರಕ್ಕೆ ಒಳಗಾಗುತ್ತಾರೆ. ರಾಜ್ಯಾಂಗದತ್ತವಾಗಿ ಹಾಗೂ ಕಾನೂನಿನ ಅಡಿಯಲ್ಲಿ ಅವರಿಗೆ ದಕ್ಕಿರುವ ಹಕ್ಕುಗಳ ಬಗ್ಗೆ ಅವರಿಗೆ ಅರಿವಿಲ್ಲ. ಅಂತಹ ಅರಿವು ಮೂಡದ ಹೊರತು ಅವರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ನಿಲ್ಲಿಸುವುದೂ ಸಾಧ್ಯವಿಲ್ಲ. ಹಾಗೆಂದು ಭಾರಿ ಗಾತ್ರದ 'ಲಾ' ಪುಸ್ತಕಗಳನ್ನು ಓದಿ ಅರಗಿಸಿಕೊಳ್ಳಿ ಎಂದು ಅನಕ್ಷರಸ್ಥರಿಂದ ಹಾಗೂ ನವ ಸಾಕ್ಷರ ಮಹಿಳೆಯರಿಂದ ಅಪೇಕ್ಷಿಸುವುದೂ ಸಾಧುವಲ್ಲ. ಇಂತಹದ್ದೊಂದು ಸಂದಿಗ್ಧವನ್ನು [illegible]ವಾರಿಸುತ್ತದೆ, ಈ ಮಾಲಿಕೆಯ ಹತ್ತು ಪುಸ್ತಕಗಳು.

ನಮ್ಮ ಸರ್ಕಾರದ ಕನ್ನಡ ಜಾಗೃತಿ ವರ್ಷದ ಆಚರಣೆಯಲ್ಲಿ ಈ ಪುಸ್ತಕಗಳ ಪ್ರಕಟಣೆ ತುಂಬ ಮಹತ್ವಪೂರ್ಣ ಕೊಡುಗೆ ಎಂದು ನನ್ನ ಭಾವನೆ. ಕನ್ನಡದ ಬೆಳವಣಿಗೆ ತುಂಬ ಅಗತ್ಯವಿರುವುದು ಕೆಳವರ್ಗಗಳಿಗೆ ಹಾಗೂ ಮಹಿಳೆಯರಿಗೆ. ಅವರನ್ನು ಗಮನದಲ್ಲಿಟ್ಟುಕೊಂಡು, ಸರಳವಾದ ಭಾಷೆ ಬಳಸಿ, ಚಿತ್ರಗಳ ಸಹಿತ, ಅವರ ಬದುಕಿಗೆ ಅನ್ವಯಿಸುವ ಉದಾಹರಣೆಗಳೊಂದಿಗೆ, ರಚಿತವಾಗಿರುವ ಈ ಪುಸ್ತಕಗಳು ಕರ್ನಾಟಕದ ಮೂಲೆ ಮೂಲೆ ತಲುಪಬೇಕು ಎಂದು ನಾನು ಆಶಿಸುತ್ತೇನೆ.

(ಎಂ. ವೀರಪ್ಪ ಮೊಯಿಲಿ)



# ಹಿಂದು ವಿವಾಹ ಕಾನೂನು


**ಮೂಲ ಪಾಠ**

ಅಭ ಸಿಂಘಲ್ ಜೋಶಿ

ಸುಂಬುಲ್ ರಿಜ್ವಿ

**ಚಿತ್ರಗಳು**

ಮನೋಹರ್

# ಹಿಂದೂ ವಿವಾಹದ ಕಾನೂನು

ಮದುವೆ ಸಾಂಸಾರಿಕ ಜೀವನದ ಮುಖ್ಯ ಘಟನೆ. ಮದುವೆಗೂ ಕಾನೂನು ಅನ್ವಯಿಸುತ್ತದೆ ಹಾಗೂ ರಕ್ಷಣೆ ನೀಡುತ್ತದೆ. ವಿವಾಹವಾಗುವವರಿಗೆ ಅನ್ವಯವಾಗುವ ಕಾನೂನಿನ ಪ್ರಕಾರವೇ ಆಯಾ ವ್ಯಕ್ತಿಗಳು ಮದುವೆಯಾಗಬೇಕು.

ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ ಸಂಪ್ರದಾಯಗಳಿವೆ, ಪದ್ಧತಿಗಳಿವೆ. ಕೆಲವು ಪದ್ಧತಿಗಳನ್ನು ಕಾನೂನು ಮಾನ್ಯ ಮಾಡಿದೆ. ಕಾನೂನು ಮಾನ್ಯ ಮಾಡಿದ ಪದ್ಧತಿಯ ಪ್ರಕಾರ, ಅಂದರೆ ಕಾನೂನಿನ ಪ್ರಕಾರ ಮದುವೆ ನಡೆಯದಿದ್ದರೆ ಅದನ್ನು ನಿಜವಾದ ಮದುವೆಯೆಂದು ಪರಿಗಣಿಸಲಾಗುವುದಿಲ್ಲ.

ಹಿಂದೂಗಳಿಗೆ ಹಿಂದೂ ವಿವಾಹ **ಅಧಿನಿಯಮ, 1955** ಎಂಬ ಕಾನೂನು ಅನ್ವಯಿಸುತ್ತದೆ.



ಹಿಂದೂ ವಿವಾಹ ಹೇಗೆ ನಡೆಯುತ್ತದೆ, ಯಾರು ಮದುವೆಯಾಗಬಹುದು ಹಾಗೂ ಕಾನೂನುಸಮ್ಮತ ವಿವಾಹಕ್ಕೆ ಇರುವ ಷರತ್ತುಗಳು ಯಾವುವು ಎಂಬ ಬಗ್ಗೆ ಕಾನೂನು ತಿಳಿಸುತ್ತದೆ. ವಿವಾಹದಲ್ಲಿ ಸಮಸ್ಯೆಗಳು ಎದ್ದಾಗ ಏನು ಮಾಡಬಹುದು ಎಂಬುದನ್ನೂ ಇದೇ ಕಾನೂನು ತಿಳಿಸುತ್ತದೆ.

**ಈ ಕಾನೂನಿನ ಮೇರೆಗೆ ಮದುವೆಯಾಗಬಹುದಾದ ವ್ಯಕ್ತಿಗಳು ಯಾರು ?**

- ಯಾವುದೇ ಪಂಥ ಅಥವಾ ಜಾತಿಯ ಹಿಂದೂಗಳು
- ಬೌದ್ಧರು
- ಜೈನರು
- ಸಿಖ್ಖರು
- ಯಾರಾದರೂ ಹಿಂದೂ ಧರ್ಮಕ್ಕೆ ಪರಿವರ್ತನೆಗೊಂಡಿದ್ದರೆ ಅವರಿಗೂ ಈ ಕಾನೂನು ಅನ್ವಯಿಸುತ್ತದೆ.



ಸರ್ಕಾರ ಅಧಿಸೂಚಿಸಿದ ಹೊರತು ಈ ಕಾನೂನು ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ಅನ್ವಯಿಸುವುದಿಲ್ಲ.

## ಕಾನೂನು ಸಮ್ಮತ ವಿವಾಹಕ್ಕೆ ನಿಯಮಗಳು

**ಹಿಂದೂ ವಿವಾಹದ ವಿಧಿವತ್ ಆಚರಣೆಯ ರೀತಿ ಹೇಗೆ ?**

ಹಿಂದೂ ವಿವಾಹವನ್ನು ವಧು ಅಥವಾ ವರನ ಪದ್ಧತಿಗೆ ಅನುಸಾರವಾಗಿ ಆಚರಿಸಬೇಕು. ಈ ಪದ್ಧತಿಗಳಲ್ಲಿ ಸಾಮಾನ್ಯವಾಗಿ 'ಹೋಮ' ಮತ್ತು 'ಸಪ್ತಪದಿ' ಗಳಿರುತ್ತವೆ. 'ಸಪ್ತಪದಿ' ಎಂದರೆ ಅಗ್ನಿಯ ಸುತ್ತ ಏಳು ಹೆಜ್ಜೆಗಳನ್ನಿಡುವುದು.

**ಹಾಗಾದರೆ 'ಸಪ್ತಪದಿ' ಯನ್ನು ಆಚರಿಸದ ಮದುವೆ ಕಾನೂನು ಮಾನ್ಯವಾಗುವುದಿಲ್ಲವೆ ?**

ಹಾಗೆನಿಲ್ಲ. ನಿಮ್ಮ ಪದ್ಧತಿಯಲ್ಲಿ ಸಪ್ತಪದಿಯ ಆಚರಣೆಯಿದ್ದರೆ ಮಾತ್ರ ಅನುಸರಿಸುವುದು ಅಗತ್ಯವಾಗುತ್ತದೆ. ಇಲ್ಲದಿದ್ದರೆ, ನೀವು ನಿಮ್ಮ ಸಮುದಾಯದಲ್ಲಿ ಅನುಸರಿಸುವ ಪದ್ಧತಿಗನುಗುಣವಾಗಿ ಮದುವೆಯಾಗಬಹುದು. ಪ್ರಾಚೀನವಾಗಿ ನಡೆದು ಬಂದ ಪದ್ಧತಿಗಳನ್ನು ಅನುಸರಿಸುತ್ತಿದ್ದಲ್ಲಿ ಆಗ ಯಾವುದೇ ಒಂದು ಪದ್ಧತಿಗೆ ಅನುಸಾರವಾಗಿ ವಿವಾಹವನ್ನು ನೆರವೇರಿಸಬಹುದು.

**ಯಾವುದೇ ಪದ್ಧತಿಗೆ ಅನುಸಾರವಾಗಿ ವಿವಾಹವಾಗುವುದು ಇಬ್ಬರಿಗೂ ಬೇಕಿಲ್ಲದಿದ್ದಲ್ಲಿ ? ಆಗ ಏನು ಮಾಡಬೇಕು ?**

ಕೆಲವೊಮ್ಮೆ, ಪದ್ಧತಿಗನುಸಾರವಾಗಿ ಮದುವೆಯಾಗುವುದು ಕೆಲವರಿಗೆ ಬೇಕಿಲ್ಲದಿರಬಹುದು. ಹುಡುಗ ಹುಡುಗಿ ಬೇರೆ ಬೇರೆ ಪದ್ಧತಿಗಳನ್ನು ಅಥವಾ ಬೇರೆ ಬೇರೆ ಧರ್ಮವನ್ನು ಅನುಸರಿಸುತ್ತಿರಬಹುದು. ಅಂಥ ಸಂದರ್ಭಗಳಲ್ಲಿ **ವಿಶೇಷ ವಿವಾಹ ಅಧಿನಿಯಮ, 1954** ಎಂಬ ಕಾನೂನು ಅನ್ವಯಿಸುತ್ತದೆ. ಅಂಥ ವಿವಾಹವನ್ನು ನ್ಯಾಯಾಲಯದಲ್ಲಿ ನೆರವೇರಿಸಬಹುದು. ಇದು ಕೂಡಾ ಕಾನೂನು ಸಮ್ಮತ ಹಾಗೂ ಸರಿಯಾದ ವಿವಾಹವೇ ಹೌದು.

**ಸರಿಯಾದ ಆಚರಣೆಗಳನ್ನು ಅನುಸರಿಸದೆ ಮದುವೆಯಾದಕ್ಕೆ ಏನಾಗುತ್ತದೆ ?**

> ಅಂಥ ವಿವಾಹವನ್ನು ವಿವಾಹವೆಂದು ಪರಿಗಣಿಸುವುದಿಲ್ಲ. ಗೋಪಾಲ ರಾಧೆಯನ್ನು ಮದುವೆಯಾಗಲು ಇಚ್ಛಿಸಿದ. ರಾಧೆಯ ತಂದೆತಾಯಿ ಒಪ್ಪಲಿಲ್ಲ. ಗೋಪಾಲ ರಾಧೆಯನ್ನು ದೇವಸ್ಥಾನಕ್ಕೆ ಕರೆದೊಯ್ದು ಹಾರ ಹಾಕಿ ಮದುವೆಯಾದ. ಅವಳಿಂದ ತಾನೂ ಹಾರ ಹಾಕಿಸಿಕೊಂಡ. ಅವಳ ಹಣೆಗೆ ಕುಂಕುಮ ಹಚ್ಚಿದ. ಇಬ್ಬರೂ ಒಟ್ಟಿಗೆ ಪ್ರಾರ್ಥಿಸಿದರು. ಈಗ ಅವಳು ತನ್ನ ಹೆಂಡತಿಯೆಂದು ರಾಧೆಗೆ ತಿಳಿಸಿದ. ಇನ್ನು ತಮಗಿಚ್ಛೆ ಬಂದಂತೆ ಇರಬಹುದೆಂದು ತಿಳಿಸಿದ. ರಾಧಾ ಗರ್ಭಿಣಿಯಾದಳು.




**ಗೋಪಾಲ ಮತ್ತು ರಾಧಾ ನಿಜವಾಗಿ ಮದುವೆಯಾಗಿದ್ದರೆ ?**

ಇಲ್ಲ. ಈ ವಿವಾಹ ಕಾನೂನು ಸಮ್ಮತವಾಗಲಿಲ್ಲ. ಗೋಪಾಲ ಮತ್ತು ರಾಧಾಳ ಜನಾಂಗದಲ್ಲಿ 'ಸಪ್ತಪದಿ' ತುಳಿಯುವುದರ ಮೂಲಕ ವಿವಾಹ ನೆರವೇರುತ್ತದೆ. ಆದ್ದರಿಂದ ಹಾಗೆ ಮಾತ್ರ ಅವರು ಮದುವೆಯಾಗಬಲ್ಲರು.

ನೆನಪಿಡಿ. ರಾಧಾಳನ್ನು ಗೋಪಾಲನ ಪತ್ನಿಯೆಂದು ಪರಿಗಣಿಸಲಾಗುವುದಿಲ್ಲ.

## ಕಾನೂನು ಸಮ್ಮತ ವಿವಾಹಕ್ಕೆ ಸಂಬಂಧಿಸಿದ ಷರತ್ತುಗಳು.

ಈ ಕಾನೂನಿನ ಮೇರೆಗೆ, ಒಂದು ವಿವಾಹ ಕಾನೂನುಸಮ್ಮತವಾಗಬೇಕಾದರೆ ಕೆಲವು ಷರತ್ತುಗಳಿವೆ. ಈ ಷರತ್ತುಗಳನ್ನು ಅನುಸರಿಸದಿದ್ದರೆ, ವಿವಾಹ ನೆರವೇರಲೇ ಇಲ್ಲ ಎಂದು ಪರಿಗಣಿಸಲಾಗುತ್ತದೆ. ಈ ಷರತ್ತುಗಳೆಂದರೆ:-

**ಹಿಂದೂ ವಿವಾಹಕ್ಕೆ ಇರುವ ಷರತ್ತುಗಳು ಯಾವುವು ?**

- ಗಂಡು ಹೆಣ್ಣು ಇಬ್ಬರೂ ಹಿಂದೂಗಳಾಗಿರಬೇಕು. ಇಬ್ಬರಲ್ಲಿ ಒಬ್ಬರು ಹಿಂದು ಆಗಿದ್ದರೂ ವಿವಾಹ ಕಾನೂನು ಬದ್ಧವಾಗುವುದಿಲ್ಲ.

ನಳಿನಿ ಮೆಹಮೂದನನ್ನು ಹಿಂದೂ ಮತಾಚರಣೆ ಅನುಸರಿಸಿ ಮದುವೆಯಾದಳು. ಇದು ಕಾನೂನುಬದ್ಧ ವಿವಾಹವಲ್ಲ. ಅವರು ವಿಶೇಷ ವಿವಾಹ ಅಧಿನಿಯಮ ಎಂಬ ಪ್ರತ್ಯೇಕ ಕಾನೂನಿನ ಮೇರೆಗೆ ವಿವಾಹವಾಗಬೇಕು.

- **ಗಂಡಾಗಲೀ ಹೆಣ್ಣಾಗಲೀ ಈಗಾಗಲೇ ವಿವಾಹಿತರಾಗಿರಬಾರದು.**

**ಒಬ್ಬರ ಗಂಡ ಅಥವಾ ಹೆಂಡತಿ ತೀರಿಕೊಂಡಿದ್ದರೆ ? ಆಗ ಆ ವ್ಯಕ್ತಿ ಮದುವೆಯಾಗುವಂತಿಲ್ಲವೆ ?**

ಹಾಗೇನಿಲ್ಲ. ಮದುವೆಯಾಗುವ ಸಮಯದಲ್ಲಿ ಗಂಡು ಅಥವಾ ಹೆಣ್ಣು ಜೀವಂತ ಪತ್ನಿ ಅಥವಾ ಪತಿಯನ್ನು ಹೊಂದಿರಬಾರದು ಅಷ್ಟೆ. ವಿವಾಹವಿಚ್ಛೇದನ ಪಡೆದಿದ್ದರೆ ಆಗ ಅವಳಾಗಲೀ ಅವನಾಗಲೀ ಮತ್ತೆ ಮದುವೆಯಾಗಬಹುದು.

**ವಿಧವೆಯೂ ಮತ್ತೆ ವಿವಾಹವಾಗಬಹುದೇ ?**

ಹೌದು. ವಿಧವೆಯೂ ವಿವಾಹವಾಗಬಹುದು. ಇತರರು ಮದುವೆಯಾಗುವ ರೀತಿಯಲ್ಲೇ, ಅವೇ ಆಚರಣೆಗಳನ್ನು ಅನುಸರಿಸಿ, ಅವಳು ಮದುವೆಯಾಗಬಹುದು.

- **ವಧು ಮತ್ತು ವರರು ಪರಸ್ಪರ ಹತ್ತಿರದ ಸಂಬಂಧಿಗಳಾಗಿರಬಾರದು.**

ಹಿಂದೂ ಕಾನೂನು, ಸೋದರಬಾಂಧವ್ಯವುಳ್ಳ ಹತ್ತಿರದ ಸಂಬಂಧಿಗಳ ನಡುವೆ ಮದುವೆಗೆ ಒಪ್ಪಿಗೆ ನೀಡುವುದಿಲ್ಲ. ಹತ್ತಿರ ಸಂಬಂಧಿಯನ್ನು ನೀವು ಮದುವೆಯಾದರೆ ಅದು ಕಾನೂನು ಬದ್ಧ ಮದುವೆಯಾಗದಿರಬಹುದು. ಆದರೆ ನಿಮ್ಮ ಪ್ರಾಚೀನ ಪದ್ಧತಿಯಲ್ಲಿ ಅದಕ್ಕೆ ಅನುಮತಿಯಿದ್ದರೆ ಆಗ ನಿಮ್ಮ ಸೋದರಸಂಬಂಧಿಯನ್ನು ಅಥವಾ ಇತರ ಸಂಬಂಧಿಯನ್ನು ಮದುವೆಯಾಗಬಹುದು. ಉದಾಹರಣೆಗೆ ದಕ್ಷಿಣ ಭಾರತದಲ್ಲಿ ಹುಡುಗಿಯ ಮಾವ ಹುಡುಗಿಯನ್ನು ಮದುವೆಯಾಗುವ ಪದ್ಧತಿಯಿದೆ. ಹಾಗೆಯೇ ಉತ್ತರ ಭಾರತದ ಕೆಲವು ಭಾಗಗಳಲ್ಲಿ ಒಬ್ಬ ಗಂಡು ತನ್ನಣ್ಣನ ವಿಧವೆಯನ್ನು ಮದುವೆಯಾಗಬಹುದು.

ಮದುವೆಯ ಸಮಯದಲ್ಲಿ ಆ ವ್ಯಕ್ತಿಗೆ ಗಂಡನಾಗಲೀ ಹೆಂಡತಿಯಾಗಲೀ ಇನ್ನೂ ಬದುಕಿದ್ದರೆ ತಪ್ಪಾಗುತ್ತದೆ





# ದ್ವಿಪತ್ನಿತ್ವ ಒಂದು ಅಪರಾಧ

**ಈಗಾಗಲೇ ಒಬ್ಬಳು ಹೆಂಡತಿ ಇದ್ದೂ ಅನೇಕರು ಇನ್ನೊಬ್ಬಳನ್ನು ಮದುವೆಯಾಗುತ್ತಾರೆ. ಕೆಲವೊಮ್ಮೆ ಇದು ಮೊದಲ ಹೆಂಡತಿಗೂ ತಿಳಿದಿರುತ್ತದೆ. ಆಗ ಅಂಥ ಮದುವೆಗಳನ್ನು ಕಾನೂನುಬದ್ಧವೆಂದು ಪರಿಗಣಿಸಬಹುದೆ ?**

ನಿಜವಾದ ಪತ್ನಿ ಮದುವೆಗೆ ಸಮ್ಮತಿ ನೀಡಿದ್ದರೂ ಎರಡನೆಯ ವಿವಾಹ ಕಾನೂನುಬದ್ಧವಾಗುವುದಿಲ್ಲ.

> ಮಂಜುನಾಥ ಮತ್ತವನ ಹೆಂಡತಿ ಶ್ಯಾಮಲಮ್ಮನಿಗೆ ಮಕ್ಕಳಿರಲಿಲ್ಲ. ಸಂತಾನ ಪ್ರಾಪ್ತಿಗೆಂದು ಮಂಜುನಾಥ ಮತ್ತೊಂದು ಮದುವೆಯಾಗಲು ನಿರ್ಧರಿಸಿದ. ಶ್ಯಾಮಲಮ್ಮ ಮೊದಮೊದಲು ಇದಕ್ಕೆ ಒಪ್ಪದಿದ್ದರೂ ಇತರರ ಬಲವಂತದಿಂದ ಒಪ್ಪಿಕೊಂಡಳು. ಮಂಜುನಾಥ ಗೀತಮ್ಮನನ್ನ ಮದುವೆಯಾದ. ಗೀತಮ್ಮನಿಗೆ ಒಂದು ಹೆಣ್ಣುಮಗುವಾಯಿತು. ತಾನು ಗೀತಮ್ಮನನ್ನು ಮದುವೆಯಾದದ್ದು ಗಂಡು ಮಗು ಪಡೆಯುವುದಕ್ಕಾಗಿ ಎಂದು ಹೇಳಿ ಮಂಜುನಾಥ ಒಂದು ವರ್ಷದ ನಂತರ ಅವಳನ್ನು ಮನೆಯಿಂದ ಹೊರಗಟ್ಟಿದ.

ಅನೇಕ ಹೆಂಗಸರು ಈ ರೀತಿಯ ಶೋಷಣೆಗೊಳಗಾಗುತ್ತಾರೆ. ಪ್ರತಿಯೊಬ್ಬ ಮಹಿಳೆಯೂ ತನ್ನನ್ನು ಈ ರೀತಿ ನಡೆಸಿಕೊಳ್ಳದಂತೆ ರಕ್ಷಿಸಿಕೊಳ್ಳಬೇಕು.

**ಕಾನೂನು ಈ ಬಗ್ಗೆ ಏನು ಹೇಳುತ್ತದೆ ?**

- ಶ್ಯಾಮಲಮ್ಮ ಗಂಡನ ಎರಡನೇ ಮದುವೆಯನ್ನು ತಡೆಯಬಹುದಿತ್ತು. ಮಂಜುನಾಥ ಮಾಡಿದುದು ಕಾನೂನಿನ ಪ್ರಕಾರ ಅಪರಾಧ. ಶ್ಯಾಮಲಮ್ಮ ಪೊಲೀಸರಿಗೆ ಅಥವಾ ಮ್ಯಾಜಿಸ್ಟ್ರೇಟರಿಗೆ ದೂರು ಕೊಟ್ಟರೆ ಮಂಜುನಾಥ ಸೆರೆಮನೆಗೆ ಹೋಗಬೇಕಾಗುತ್ತದೆ. ಆತ ಸರ್ಕಾರಿ ನೌಕರನಾದರೆ ಅವನು ಕೆಲಸ ಕಳೆದುಕೊಳ್ಳ ಬೇಕಾಗುತ್ತದೆ.
- ಗೀತಮ್ಮನ ತಂದೆ ತಾಯಿ ಮದುವೆಯಾದ ವ್ಯಕ್ತಿಗೆ ಮಗಳನ್ನು ಮದುವೆ ಮಾಡಿಕೊಡಲು ಒಪ್ಪಬಾರದು.
- ಗೀತಮ್ಮನಿಗೆ ಮಂಜುನಾಥನ ಆಸ್ತಿಯಲ್ಲಿ ಯಾವ ಪಾಲೂ ಸಿಗುವುದಿಲ್ಲ. ನ್ಯಾಯಾಲಯಕ್ಕೆ ಹೋಗಿ ಪತ್ನಿಯಾಗಿ ತನ್ನ ಹಕ್ಕುಗಳಿಗಾಗಿ ಕೇಳುವಂತಿಲ್ಲ. ಕಾನೂನಿನ ಕಣ್ಣಿನಲ್ಲಿ ಗೀತಮ್ಮ ಮಂಜುನಾಥನ ಹೆಂಡತಿಯೇ ಅಲ್ಲ.
- ಮಂಜುನಾಥ ತನ್ನ ಮೊದಲನೆಯ ಮದುವೆಯ ವಿಷಯವನ್ನು ಗೀತಮ್ಮನಿಂದ ಮುಚ್ಚಿಟ್ಟಿದ್ದರೆ, ಅವಳು ಅವನ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ಹೂಡಬಹುದು. ತನಗೆ ಮೋಸ ಮಾಡಿದ್ದಕ್ಕಾಗಿ ಧನ ಪರಿಹಾರ ಕೇಳಬಹುದು.
- ಹೀಗೆ ಹುಟ್ಟಿದ ಹೆಣ್ಣು ಮಗುವನ್ನು ಮಂಜುನಾಥ ಕಾನೂನು ಸಮ್ಮತ ಮಗುವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಗೀತಮ್ಮ ನ್ಯಾಯಾಲಯದ ಮೊರೆಹೋಗಿ ಮಗುವಿನ ಹಕ್ಕುಗಳಿಗಾಗಿ ಕೇಳಬಹುದು. ಮಂಜುನಾಥ ಆ ಮಗುವನ್ನು ನೋಡಿಕೊಳ್ಳಲೇಬೇಕು. ಅಲ್ಲದೆ, ಅವನು ಆಸ್ತಿ ಮುಂತಾದವುಗಳಲ್ಲಿ ಆ ಮಗುವಿಗಿರುವ ಎಲ್ಲ ಹಕ್ಕುಗಳನ್ನು ನೀಡಲೇಬೇಕು.

ಆದರೆ ನೆನಪಿಡಿ: ನಿಮ್ಮ ಸಮುದಾಯದಲ್ಲಿ ಹತ್ತಿರದ ಸಂಬಂಧಿಗಳನ್ನು ಮದುವೆಯಾಗುವ ಪದ್ಧತಿಯಿಲ್ಲದಿದ್ದರೆ ಹತ್ತಿರದ ಸಂಬಂಧಿಗಳನ್ನು ಮದುವೆಯಾಗಬಾರದು. ಅದು ನಿಜವಾದ ಮತ್ತು ಕಾನೂನುಬದ್ಧ ವಿವಾಹವಾಗುವುದಿಲ್ಲ.

ಮದುವೆ ಕಾನೂನುಬದ್ಧ ವಿವಾಹವಾಗಬೇಕಾದರೆ ಕೆಲವೊಂದು ಅಗತ್ಯ ಅಂಶಗಳಿರಬೇಕು. ಈ ಷರತ್ತುಗಳ ಉಲ್ಲಂಘನೆಯಾದರೆ, ತೊಂದರೆಗೊಳಗಾದ ಪತ್ನಿ ಅಥವಾ ಪತಿ, ಅಂಥ ವಿವಾಹವನ್ನು ಕಾನೂನುಬದ್ಧ ಅಲ್ಲವೆಂದು ಘೋಷಿಸುವಂತೆ ನ್ಯಾಯಾಲಯವನ್ನು ಕೋರಬಹುದು. ಆ ಷರತ್ತುಗಳು ಯಾವುವೆಂದರೆ:-

- **ಹುಡುಗ ಮತ್ತು ಹುಡುಗಿ ಸ್ವಸ್ಥಚಿತ್ತರಾಗಿರಬೇಕು.**

**ಸ್ವಸ್ಥಚಿತ್ತ ಎಂದರೇನು ?**

ಸ್ವಸ್ಥಚಿತ್ತ ಎಂದರೆ ವ್ಯಕ್ತಿ ಮನೋವಿಕಲ ಅಥವಾ ಮೂರ್ಛೆರೋಗಿ ಆಗಿರಬಾರದು. ಕೆಲವರು ಸಂಪೂರ್ಣವಾಗಿ ಹುಚ್ಚ ಅಥವಾ ಮನೋವಿಕಲರಾಗಿರುತ್ತಾರೆ. ಅಂಥ ವ್ಯಕ್ತಿ ತನ್ನ ವಿವಾಹಕ್ಕೆ ಕಾನೂನುಬದ್ಧ ಒಪ್ಪಿಗೆಯನ್ನು ನೀಡುವುದು ಸಾಧ್ಯವಾಗುವುದಿಲ್ಲ. ಅಂಥ ವ್ಯಕ್ತಿ ಮದುವೆಯಾಗುವುದನ್ನು ಕಾನೂನು ನಿಷೇಧಿಸುತ್ತದೆ.

**ಏಕೆ ಹೀಗೆ ?**

ಏಕೆಂದರೆ, ಮಾನಸಿಕವಾಗಿ ಅಸ್ವಸ್ಥನಾಗಿರುವ ವ್ಯಕ್ತಿಗೆ ತಾನು ಏನು ಮಾಡುತ್ತಿದ್ದೇನೆಂಬುದು ತಿಳಿದಿರುವುದಿಲ್ಲ. ಅಂಥ ವ್ಯಕ್ತಿಗೆ ವಿವಾಹದ ಮಹತ್ವವೇ ಅರ್ಥವಾಗುವುದಿಲ್ಲ. ಆದ್ದರಿಂದಲೇ ಅಂಥ ವ್ಯಕ್ತಿ ವಿವಾಹವಾಗಬಾರದು. ಒಂದು ವೇಳೆ ಅವರಿಗೆ ವಿವಾಹದ ಮಹತ್ವ ಅರ್ಥವಾದರೂ ಅವರು ವಿವಾಹದ ನಂತರ ಮಾಮೂಲಿ ಜೀವನವನ್ನು ನಡೆಸಲಾರರು. ಹಾಗೆಯೇ, ಯಾರಿಗಾದರೂ ಆಗಿಂದಾಗ್ಗೆ ಮೂರ್ಛೆ ಬರುತ್ತಿದ್ದರೆ ಆಗ ಅಂಥ ವ್ಯಕ್ತಿಯು ವಿವಾಹವಾಗಬಾರದು.

**ಅನೇಕರು ವಿವಾಹವಿಧಿಗಳು ಪೂರ್ಣವಾಗುವವರೆಗೆ ವಧು ಅಥವಾ ವರನನ್ನು ನೋಡುವುದಿಲ್ಲ. ತನ್ನನ್ನು ಒಬ್ಬ ಹುಚ್ಚನಿಗೆ ಕೊಟ್ಟು ಮದುವೆ ಮಾಡಿದರೆ ಮಹಿಳೆ ಏನು ಮಾಡಬಹುದು ?**

ಒಬ್ಬರಿಗೆ ಮದುವೆಯಾದ ಅನಂತರ ತನ್ನ ಪತಿ/ಪತ್ನಿ ಅಸ್ವಸ್ಥಚಿತ್ತ ವ್ಯಕ್ತಿಯೆಂದು ತಿಳಿದುಬಂದರೆ ಆ ವ್ಯಕ್ತಿ ನ್ಯಾಯಾಲಯದ ಮೊರೆ ಹೋಗಿ ಅಂಥ ವಿವಾಹವನ್ನು ಶೂನ್ಯ ಮತ್ತು ಅಕೃತವೆಂದು ಘೋಷಿಸುವಂತೆ ಪ್ರಾರ್ಥಿಸಬಹುದು.

> ಮಾಲಾಳ ಮದುವೆಯನ್ನು ಅವಳ ತಂದೆತಾಯಿಯರು ರಮೇಶನೊಂದಿಗೆ ನಿಶ್ಚಯಿಸಿದರು. ಮದುವೆಯ ನಂತರ ಮಾಲಾಳಿಗೆ ರಮೇಶ ಮನೋವಿಕಲನೆಂದು ತಿಳಿದುಬಂತು. ತಾನು ಮಾಲಾಳನ್ನು ಮದುವೆಯಾಗಿದ್ದೇನೆಂಬುದು ಸಹ ಕೆಲವೊಮ್ಮೆ




ಅವನಿಗೆ ಅರ್ಥವಾಗುತ್ತಿರಲಿಲ್ಲ. ಮಾಲಾ ಕೂಡಲೇ ತನ್ನ ತವರಿಗೆ ಹಿಂತಿರುಗಿದಳು. ಅವಳ ತಂದೆತಾಯಿಯರು ಸಹ ಅವಳನ್ನು ಮತ್ತೆ ರಮೇಶನ ಬಳಿಗೆ ಕಳುಹಿಸಬಾರದೆಂದು ನಿರ್ಧರಿಸಿದರು. ಆದರೆ, ಮಾಲಾಳಿಗೆ ರಮೇಶನೊಂದಿಗೆ ವಿವಾಹವಾಗಿರುವುದರಿಂದ ಅವಳು ಅವನೊಂದಿಗೆ ಇರಲೇಬೇಕೆಂದು ಊರ ಜನ ಹೇಳಿದರು. ಮಾಲಾಳ ತಂದೆ ವಕೀಲರ ಮೂಲಕ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದರು. ನ್ಯಾಯಾಲಯ ಹೀಗೆ ಅಭಿಪ್ರಾಯಪಟ್ಟಿತು.

- ರಮೇಶ ಮದುವೆಯಾಗುವಾಗಲೇ ಮನೋವಿಕಲನಾಗಿದ್ದುದರಿಂದ ನಿಜವಾದ ಮದುವೆ ನಡೆದೇ ಇಲ್ಲ.
- ಮಾಲಾ ಮತ್ತೆ ಮದುವೆಯಾಗಲು ಸ್ವತಂತ್ರಳಿದ್ದಾಳೆ. ಮದುವೆಯಾಗಿಯೇ ಇಲ್ಲ ಎಂಬಂತೆ ಅವಳು ಜೀವನ ಪ್ರಾರಂಭಿಸಬಹುದು.

**ಮದುವೆಯಾದ ನಂತರ ರಮೇಶನಿಗೆ ಹುಚ್ಚು ಹಿಡಿದಿದ್ದರೆ ಮಾಲಾ ಜೀವನವಿಡೀ ಅವನೊಂದಿಗೆ ಬಾಳಬೇಕಿತ್ತೆ ?**

ಇಲ್ಲ. ಆಗ ಮಾಲಾ ನ್ಯಾಯಾಲಯದಲ್ಲಿ ವಿಚ್ಛೇದನಕ್ಕಾಗಿ ಕೇಳಬಹುದು.

- **ವರನ ವಯಸ್ಸು ಕನಿಷ್ಠ ಪಕ್ಷ 21 ವರ್ಷಗಳಾಗಿರಬೇಕು ಮತ್ತು ವಧುವಿನ ವಯಸ್ಸು ಕನಿಷ್ಠ ಪಕ್ಷ 18 ವರ್ಷಗಳಾಗಿರಬೇಕು**

# ಬಾಲ್ಯವಿವಾಹ ಅಪರಾಧ

21 ಮತ್ತು 18 ವರ್ಷಗಳಿಗೆ ಮುಂಚೆ ಮದುವೆಯಾಗುವುದು ಕ್ರಿಮಿನಲ್ ಅಪರಾಧ.

**ಹಳ್ಳಿಗಳಲ್ಲಿ ಅನೇಕರು ತಮ್ಮ ಮಕ್ಕಳಿಗೆ 21 ಅಥವಾ 18 ವರ್ಷ ವಯಸ್ಸಾಗುವುದರೊಳಗೆ ಮದುವೆ ಮಾಡಿಬಿಡುತ್ತಾರೆ ಅಂಥ ವಿವಾಹಗಳು ಕಾನೂನುಬದ್ಧವೆ?**

ಹೌದು. ಅಂಥ ವಿವಾಹಗಳು ಕಾನೂನುಬದ್ದ. ಆದರೆ ಯಾರಾದರೂ ತಿಳಿದೂ ತಿಳಿದೂ ಅಪ್ರಾಪ್ತವಯಸ್ಸಿನಲ್ಲಿ ಮದುವೆಯಾದರೆ ಅವರಿಗೆ,

- 15 ದಿನಗಳ ಜೈಲುವಾಸ,
  ಅಥವಾ
- 1000 ರೂ. ಗಳವರೆಗೆ ಜುಲ್ಮಾನೆ ಅಥವಾ ಎರಡೂ ಶಿಕ್ಷೆ ವಿಧಿಸಲಾಗುತ್ತದೆ.

**ಸಾಮಾನ್ಯವಾಗಿ ಮಕ್ಕಳು ತಾವಾಗಿಯೇ ಅಪ್ರಾಪ್ತ ವಯಸ್ಸಿನಲ್ಲಿ ಮದುವೆಯಾಗುವುದಕ್ಕಿಂತ ಹೆಚ್ಚಾಗಿ ತಂದೆತಾಯಿಯರು ಸಂಬಂಧಿಗಳು ಮದುವೆ ನಿಶ್ಚಿಯಿಸುವುದೇ ಹೆಚ್ಚು. ಹಾಗಾದರೆ ಮಕ್ಕಳನ್ನು ಏಕೆ ದಂಡಿಸಬೇಕು?**



**ಬಾಲ್ಯವಿವಾಹ ನಿಗ್ರಹ ಅಧಿನಿಯಮ 1929** ಎಂಬ ಮತ್ತೊಂದು ಕಾನೂನು ಇದೆ. ಬಾಲ್ಯವಿವಾಹವನ್ನು ನೆರವೇರಿಸುವ, ನಡೆಸುವ ಅಥವಾ ನಿರ್ದೇಶಿಸುವ ಯಾರನ್ನೇ ಆಗಲಿ ಈ ಕಾನೂನಿನಡಿ ದಂಡಿಸಬಹುದು, ಮದುವೆಯನ್ನು ಮಾಡಿಸುವ ಪಂಡಿತನನ್ನೂ ಕೂಡ.

**ಇದಕ್ಕೆ ಶಿಕ್ಷೆ ಏನು ?**

ಬಾಲ್ಯವಿವಾಹ ನೆರವೇರಿಸುವ ಅಥವಾ ನಿರ್ದೇಶಿಸುವ ಯಾವನೇ ವ್ಯಕ್ತಿಯನ್ನು ಮೂರು ತಿಂಗಳವರೆಗಿನ ಕಾರಾವಾಸ ಮತ್ತು ಜುಲ್ಮಾನೆಯಿಂದ ದಂಡಿಸಬಹುದು.

**ಬಾಲ್ಯವಿವಾಹವನ್ನು ತಡೆಯಬಹುದೆ ?**

ತಡೆಯಬಹುದು. ವಿವಾಹ ನಡೆಯಬಾರದೆಂದು ಮ್ಯಾಜಿಸ್ಟ್ರೇಟರು ಆದೇಶ ನೀಡಬಹುದು. ಇದನ್ನು ನಿರ್ಬಂಧಕಾಜ್ಞೆ ಎನ್ನುತ್ತಾರೆ.

**ನಿರ್ಬಂಧಕಾಜ್ಞೆ ಜಾರಿ ಮಾಡಿದ್ದರೂ ಕೆಲವರು ಮುಂದುವರಿದು ಮದುವೆಯಾಗುತ್ತಾರೆ. ಅಂಥ ಮದುವೆ ಅಮಾನ್ಯವಾಗುತ್ತದೆಯೆ ?**

ಇಲ್ಲ, ವಿವಾಹ ಕಾನೂನುಬದ್ಧವಾಗುತ್ತದೆ. ಆದರೆ ಮ್ಯಾಜಿಸ್ಟ್ರೇಟರ ಆದೇಶವನ್ನು ಪಾಲಿಸದಿದ್ದುದಕ್ಕೆ ಶಿಕ್ಷೆ ಆಗುತ್ತದೆ.

ಬಾಲ್ಯ ವಿವಾಹವನ್ನು ನಡೆಸಲಾಗಿದೆ ಅಥವಾ ನಡೆದಿದೆ ಎಂದು ಪೊಲೀಸರಿಗೆ ಕಂಡುಬಂದಲ್ಲಿ ಅವರು ಅದನ್ನು ಮಾಡಿದವರ ವಿರುದ್ಧ ಮೊಕದ್ದಮೆ ದಾಖಲು ಮಾಡುತ್ತಾರೆ.

**ಬಾಲ್ಯವಿವಾಹ ನಡೆಸಬೇಕೆಂದು ನಿರ್ಧರಿಸಿರುವುದನ್ನು ಕೆಲವೊಮ್ಮೆ ನಾವು ಕಾಣಬಹುದು. ಅಂಥವನ್ನು ತಡೆಯುವ ಬಗೆ ಹೇಗೆ ?**

ಅಪ್ರಾಪ್ತರಿಗೆ ಸಂಬಂಧಿಯಾದವರು, ಸ್ನೇಹಿತರಾದವರು ಯಾರು ಬೇಕಾದರೂ ಬಾಲ್ಯವಿವಾಹ ನಡೆಯಲಿದೆ ಎಂಬ ಬಗ್ಗೆ ಪೊಲೀಸರಿಗೆ ದೂರು ನೀಡಬಹುದು. ಸರಿಯಾದ ವಿವರಗಳನ್ನು ಕೊಡಬೇಕು. ಇಲ್ಲದಿದ್ದರೆ ಪೊಲೀಸರು ನಿಮ್ಮನ್ನು ನಂಬುವುದಿಲ್ಲ. ಅನಂತರ ಪೊಲೀಸರು ವಿಚಾರಣೆ ನಡೆಸುತ್ತಾರೆ. ಬಾಲ್ಯವಿವಾಹ ನಿಜವಾಗಿಯೂ ನಡೆಯಲಿದ್ದರೆ ಅವರು ಆ ವಿಷಯವನ್ನು ಮ್ಯಾಜಿಸ್ಟ್ರೇಟರಿಗೆ ತಿಳಿಸುತ್ತಾರೆ. ಅವರು ಆ ವ್ಯಕ್ತಿಗಳ ವಿರುದ್ಧ ಮೊಕದ್ದಮೆ ಪ್ರಾರಂಭಿಸುತ್ತಾರೆ.

ಮದುವೆಯನ್ನು ಇಲ್ಲವಾಗಿಸುವ ಇನ್ನೂ ಕೆಲವು ಕಾರಣಗಳಿವೆ ಅವೆಂದರೆ:

- ಗಂಡ ಷಂಡನೆಂಬ ಕಾರಣದಿಂದ ವಿವಾಹವು ಪ್ರಸ್ತದ ಮೂಲಕ ಪೂರ್ಣಗೊಳ್ಳದಿದ್ದ ಸಂದರ್ಭದಲ್ಲಿ,
- ಬಲವಂತ ಅಥವಾ ಮೋಸದಿಂದ ಮದುವೆ ನಡೆದಿರುವ ಸಂದರ್ಭದಲ್ಲಿ.

ಸತ್ಯವತಿಯ ಮದುವೆ ನಂಜುಂಡರಾಯನ ಜೊತೆ ನಿಶ್ಚಯವಾಯಿತು. ನಂಜುಂಡರಾಯ ಉಚ್ಚ ಬ್ರಾಹ್ಮಣ ಕುಲದವನೆಂದು ಸತ್ಯವತಿಯ ಮನೆಯವರಿಗೆ ವರನ ತಂದೆ ತಾಯಿಹೇಳಿದ್ದರು. ಮದುವೆಯ ನಂತರ ನಂಜುಡರಾಯ ಔರಸ ಪುತ್ರನೆಂದು ಸತ್ಯವತಿಗೆ ತಿಳಿದುಬಂತು. ಸತ್ಯವತಿಯ ವಿವಾಹವನ್ನು ನ್ಯಾಯಾಲಯ ರದ್ದುಗೊಳಿಸಿತು.

**ಮೋಸ ಅಥವಾ ಬಲವಂತದ ಇತರ ರೀತಿಗಳಾವುವು ?**

- ಯಾರಾದರೂ ವರನ ಹಿನ್ನೆಲೆಯ ಬಗ್ಗೆ ಈ ಕೆಳಕಂಡಂತೆ ತಪ್ಪುಮಾಹಿತಿ ನೀಡಿದ್ದರೆ,
  - ಆತನ ವಯಸ್ಸು
  - ಅವನ ಉದ್ಯೋಗ
  - ಅವನಿಗಿರುವ ಗಂಭೀರ ಸ್ವರೂಪದ ಖಾಯಿಲೆ

ಅಥವಾ ವಿಶಯ ಮುಚ್ಚಿಟ್ಟಿದ್ದರೆ,ಒಪ್ಪಿಗೆಯನ್ನು ಮೋಸದಿಂದ ಪಡೆಯಲಾಗಿದೆ ಎಂದರ್ಥ.

- ಮದುವೆಯಾಗೆಂದು ಯಾವುದೇ ರೀತಿಯಲ್ಲಿ ಹೆದರಿಸಿದರೆ ಮತ್ತು ಬಲವಂತ ಮಾಡಿದರೆ ಆಗಲೂ ಒಪ್ಪಿಗೆಯನ್ನು ಬಲವಂತದಿಂದ ಪಡೆಯಲಾಗಿದೆ ಎಂದರ್ಥ. ಆಗ ಸಹ ಮದುವೆಯನ್ನು ನ್ಯಾಯಾಲಯವು ರದ್ದುಗೊಳಿಸಬಹುದು.

ಈ ಕಾರಣಗಳಿಗಾಗಿ ನ್ಯಾಯಾಲಯಕ್ಕೆ ಹೋಗುವುದಿದ್ದರೆ ಮೋಸ ತಿಳಿದ ಕೂಡಲೇ ಹೋಗಬೇಕು. ವಿಷಯ ತಿಳಿದುಬಂದ ಒಂದು ವರ್ಷದ ನಂತರ ನ್ಯಾಯಾಲಯ ನಿಮ್ಮ ಅರ್ಜಿಯನ್ನು ಅಂಗೀಕರಿಸುವುದಿಲ್ಲ.

- ಮದುವೆಯಾಗುವಾಗ ಪತ್ನಿ ಬೇರೊಬ್ಬನಿಗೆ ಗರ್ಭಿಣಿಯಾಗಿದ್ದರೆ ವಿವಾಹವನ್ನು ಶೂನ್ಯ ಮತ್ತು ಅಕೃತವೆಂದು ಘೋಷಿಸಬೇಕೆಂದು ಕೋರಿ ಪತಿ ಅರ್ಜಿ ನೀಡಬಹುದು. ಮದುವೆಯಾಗುವಾಗ ಇದು ಅವನಿಗೆ ತಿಳಿದಿರದಿದ್ದರೆ ಮಾತ್ರ ಅವನು ಹೀಗೆ ಮಾಡಬಹುದು. ಈ ರೀತಿಯ ಅರ್ಜಿಯನ್ನು ವಿವಾಹವಾದ ಒಂದು ವರ್ಷದ ತರುವಾಯ ಕೊಡುವಂತಿಲ್ಲ. ಪತ್ನಿ ಮತ್ತೊಬ್ಬನಿಂದ ಗರ್ಭಿಣಿಯಾಗಿದ್ದಾಳೆಂದು ತಿಳಿದ ನಂತರವೂ ಅವನು ಅವಳೊಂದಿಗೆ ವಾಸ ಮಾಡಿದ್ದರೆ ಆಗಲೂ ಅವನು ಅರ್ಜಿ ಕೊಡುವಂತಿಲ್ಲ.

## ದಾಂಪತ್ಯದ ಹಕ್ಕನ್ನು ಪುನಃ ಸ್ಥಾಪಿಸುವುದು ಎಂದರೇನು ?

ಗಂಡ ಹೆಂಡತಿ ಮದುವೆಯಾದಾಗ ಪರಸ್ಪರ ಪೂರೈಸಬೇಕಾದ ಕೆಲವೊಂದು ಬಾಧ್ಯತೆಗಳಿರುತ್ತವೆ. ಉದಾಹರಣೆಗೆ ಪತಿ ಕುಟುಂಬ ನಿರ್ವಹಣೆಗೆ ಅನುಕೂಲ ಕಲ್ಪಿಸಲು ಬದ್ಧನಾಗಿರುತ್ತಾನೆ. ಪತಿ ಪತ್ನಿಯರು ಒಬ್ಬರಿಗೊಬ್ಬರು ಜೊತೆ ನೀಡಬೇಕು, ಒಟ್ಟಿಗೆ ಬಾಳಬೇಕು ಎಂದು ಬದ್ಧರಾಗಿರುತ್ತಾರೆ.

ಕೆಲವೊಮ್ಮೆ, ಯಾವುದೇ ಬಲವಾದ ಕಾರಣವಿಲ್ಲದೆ ಗಂಡ ಹೆಂಡತಿಯನ್ನ ಬಿಟ್ಟುಬಿಡಬಹುದು, ಒಟ್ಟಿಗೆ ಇದ್ದೂ ವೈವಾಹಿಕ ಜೀವನದ ಭಾಧ್ಯತೆಗಳನ್ನು ಪೂರೈಸದೇ ಇರಬಹುದು. ಅಂಥ ಸಂದರ್ಭಗಳಲ್ಲಿ ವೈವಾಹಿಕ ಬಾಧ್ಯತೆಗಳನ್ನು ಪೂರೈಸುವಂತೆ ನ್ಯಾಯಾಲಯ ಗಂಡನಿಗೆ ಆದೇಶ ನೀಡಬಹುದು.

> ತಿಮ್ಮಪ್ಪ ಮತ್ತು ತಿರುಮಲಾಂಬ ಒಂದು ವರ್ಷದ ಹಿಂದೆ ಮದುವೆಯಾಗಿದ್ದರು. ಒಂದೇ ವರ್ಷದಲ್ಲಿ ತಿಮ್ಮಪ್ಪ ತಿರುಮಲಾಂಬಳನ್ನು ಅಲಕ್ಷ್ಯ ಮಾಡಲು ಪ್ರಾರಂಭಿಸಿದ. ಮನೆಯನ್ನು ನಡೆಸಲು ಹಣ ಕೊಡುತ್ತಿರಲಿಲ್ಲ. ಒಂದೇ ಮನೆಯಲ್ಲಿ ವಾಸ ಮಾಡುತ್ತಿದ್ದರೂ ಅವರಲ್ಲಿ ಸಂಪರ್ಕವಿರಲಿಲ್ಲ. ಮಾತನಾಡುತ್ತಿರಲಿಲ್ಲ. ಅವಳೊಡನೆ ಸಹಜೀವನ ನಡೆಸುತ್ತಿರಲಿಲ್ಲ. ಕೆಲ ದಿನಗಳ ನಂತರ ತಿಮ್ಮಪ್ಪ ಸಂಬಂಧಿಕರೊಬ್ಬರ ಮನೆಯಲ್ಲಿ ವಾಸಿಸಲುಪ್ರಾರಂಭಿಸಿದ. ತಿಮ್ಮಪ್ಪ ತಿರುಗಿಬಂದು ತಿರುಮಲಾಂಬಳ ಜೊತೆ ಸಹಬಾಳ್ವೆ ನಡೆಸಬೇಕಂದು ನ್ಯಾಯಾಲಯ ಆದೇಶ ನೀಡಿತು.

**ನ್ಯಾಯಾಲಯ ಹೀಗೆ ಆದೇಶ ನೀಡಿದ್ದೇಕೆ ?**

- ಏಕೆಂದರೆ ತಿಮ್ಮಪ್ಪ ತಿರುಮಲಾಂಬಳನ್ನ ಮದುವೆಯಾಗಿದ್ದ.
- ತಿರುಮಲಾಂಬಳನ್ನ ಬಿಡಲೇಬೇಕಾದಂಥ ಯಾವುದೇ ತಪ್ಪನ್ನು ಅವಳು ಮಾಡಿರಲಿಲ್ಲ.

**ಈಗಲೂ ತಿರುಮಲಾಂಬಳ ಬಳಿಗೆ ಹೋಗಲು ತಿಮ್ಮಪ್ಪ ನಿರಾಕರಿಸಿದರೆ ಅವನನ್ನು ಒತ್ತಾಯ ಪಡಿಸಬಹುದೆ?**

ಒಂದು ಗಂಡು ಹೆಣ್ಣು ಒಟ್ಟಿಗೆ ಬಾಳುವಂತೆ ಯಾರೂ ಬಲವಂತಪಡಿಸಲಾಗದು. ಆದರೆ ಕೆಲವೊಮ್ಮೆ ಗಂಡಸರು ತಮ್ಮ ಜವಾಬ್ದಾರಿಗಳನ್ನು ಅಲಕ್ಷಿಸುತ್ತಾರೆ. ಆದ್ದರಿಂದ ಅವನಿಗೆ ಶಿಕ್ಷೆಯಾಗಿ ನ್ಯಾಯಾಲಯ ಅವನ ಆಸ್ತಿಯನ್ನು ಜಪ್ತಿ ಮಾಡುತ್ತದೆ.

**ಮಹಿಳೆ ತನ್ನ ಪತಿಯನ್ನು ಬಿಟ್ಟರೆ ನ್ಯಾಯಾಲಯ ಅವನಲ್ಲಿಗೆ ಹಿಂತಿರುಗಿಹೋಗುವಂತೆ ಅವಳನ್ನು ಒತ್ತಾಯಪಡಿಸಬಹುದೆ ?**

ಒತ್ತಾಯಪಡಿಸಬಹುದು. ಆದರೆ ಗಂಡನನ್ನು ತೊರೆಯಲು ಬಲವಾದ ಕಾರಣವಿದ್ದರೆ ಆಗ ನ್ಯಾಯಾಲಯ ಆಕೆಯನ್ನ ಒತ್ತಾಯಿಸುವುದಿಲ್ಲ.

**ಬಲವಾದ ಕಾರಣ ಯಾವುದು ?**

ಗಂಡ ಮತ್ತೆ ಮದುವೆಯಾಗಿರುವ ಅಥವಾ ಅವನಿಗೆ ಕುಷ್ಠರೋಗವಿರುವ ಅಥವಾ ಅವಳನ್ನು ಉದ್ದೇಶಪೂರ್ವಕವಾಗಿ ಅಲಕ್ಷಿಸಿರುವ ಅಥವಾ ಆಕೆಯನ್ನು ಕಠಿಣವಾಗಿ ನಡೆಸಿಕೊಂಡಿರುವ ಕಾರಣಕ್ಕಾಗಿ ಗಂಡನನ್ನು ಬಿಟ್ಟರೆ ನ್ಯಾಯಾಲಯ ಅವನಲ್ಲಿಗೆ ಹಿಂದಿರುಗಿ ಹೋಗುವಂತೆ ಆದೇಶಿಸುವುದಿಲ್ಲ.

## ವಿವಾಹ ವಿಚ್ಛೇದನ

ವಿವಾಹ ಕಾನೂನು ಸಮ್ಮತವಾಗಿದ್ದು ಸಿಂಧುವಾದುದಾಗಿರಬಹುದು. ಆದರೆ ನಂತರ ತೀರ ಅಹಿತಕಾರಿ ಸಂದರ್ಭಗಳು ತಲೆದೋರಬಹುದು. ಆಗಲೂ ಗಂಡಹೆಂಡತಿ ಒಟ್ಟಿಗೆ ಬದುಕಬೇಕೆ ? ದಾಂಪತ್ಯ ಜೀವನದಲ್ಲಿ ಏರಿಳಿತಗಳು ಇದ್ದೇ ಇರುತ್ತವೆ. ಆದರೆ ಕೆಲವೊಮ್ಮೆ ಗಂಡ ಹೆಂಡತಿ ಒಂದಾಗಿ ಬಾಳುವುದು ಅಸಾಧ್ಯ ಎನ್ನುವ ಮಟ್ಟ ತಲುಪುತ್ತದೆ. ಅಂತಹ ಸಂದರ್ಭಗಳಲ್ಲಿ ಕಾನೂನು ವಿವಾಹ ವಿಚ್ಛೇದನ ಎಂಬ ಪರಿಹಾರವನ್ನು ಒದಗಿಸಿದೆ. ಮದುವೆ ಮುರಿಯುವಂತೆ ನ್ಯಾಯಾಲಯವನ್ನು ಕೋರಬಹುದು. ಆಗ ಗಂಡ ಹೆಂಡಿರಾಗಿ ಪರಸ್ಪರ ಬಾಧ್ಯತೆಯಿಂದ ಅವರಿಬ್ಬರೂ ಬಿಡುಗಡೆ ಪಡೆಯುತ್ತಾರೆ.

**ಯಾವ ಕಾರಣಗಳ ಮೇಲೆ ಹೆಂಗಸು ವಿವಾಹ ವಿಚ್ಛೇದನವನ್ನು ಪಡೆಯಬಹುದು ?**

ಕಾನೂನಿನಲ್ಲಿ ಕೊಟ್ಟಿರುವ ಅನೇಕ ಕಾರಣಗಳ ಮೇಲೆ ಗಂಡ ಹೆಂಡತಿ ವಿವಾಹ ವಿಚ್ಛೇದನವನ್ನು ಪಡೆಯಬಹುದು. ಹೆಂಗಸು ಕೆಲವೊಂದು ಹೆಚ್ಚಿನ ಕಾರಣಗಳಿಗಾಗಿ ಸಹ ವಿವಾಹ ವಿಚ್ಛೇದನವನ್ನು ಪಡೆಯಬಹುದು. ಹಿಂದೂ ಕಾನೂನಿನ ಮೇರೆಗೆ ವಿಚ್ಛೇದನ ಪಡೆಯಲು ಕಾರಣಗಳೆಂದರೆ:-

- **ಪರಸ್ತ್ರೀಸಂಗ:**
  ನಿಮ್ಮ ಗಂಡ ಮದುವೆಯ ನಂತರ ಮತ್ತೊಬ್ಬ ಹೆಂಗಸಿನ ಜೊತೆ ಲೈಂಗಿಕ ಸಂಪರ್ಕ ಹೊಂದಿದ್ದರೆ ಆಗ ನೀವು ವಿವಾಹ ವಿಚ್ಛೇದನಕ್ಕಾಗಿ ಕೇಳಬಹುದು. ಆ ಹೆಂಗಸಿನೊಂದಿಗೆ ಲೈಂಗಿಕ ಸಂಪರ್ಕ ಹೊಂದಲಿಕ್ಕೆಂದು ಅವಳನ್ನು ಮದುವೆಯಾಗಿದ್ದೇನೆಂದು ಆತ ಹೇಳಿದರೂ ಅದು ಪರಸ್ತ್ರೀ ಸಂಗವೇ ಹೌದು. ಏಕೆಂದರೆ ಕಾನೂನಿನ ಪ್ರಕಾರ ಎರಡನೆಯ ಮದುವೆ ಮದುವೆಯೇ ಅಲ್ಲ.

- **ಪರಿತ್ಯಾಗ**
  ನಿಮ್ಮ ತಪ್ಪಿಲ್ಲದೆಯೇ ನಿಮ್ಮ ಗಂಡ ನಿಮ್ಮನ್ನ ಬಿಟ್ಟುಬಿಟ್ಟರೆ ನೀವು ವಿವಾಹ ವಿಚ್ಛೇದನ ಪಡೆಯಬಹುದು. ಬಲವಾದ ಅಥವಾ ಸಾಕಷ್ಟು ಕಾರಣವಿಲ್ಲದೆ ಗಂಡ ಹೆಂಡತಿಯನ್ನ ಬಿಟ್ಟುಬಿಟ್ಟರೆ ಅದನ್ನು ಪರಿತ್ಯಾಗ ಎನ್ನಲಾಗಿದೆ. ವಿವಾಹ ವಿಚ್ಛೇದನವನ್ನು ಬೇಡುವುದಕ್ಕೆ ಮುಂಚೆ ಹೀಗೆ ಕಡೆಯಪಕ್ಷ ಎರಡು ವರ್ಷ ಪರಿತ್ಯಜಿಸಿರಬೇಕು.

ಸುರೇಶ ಮತ್ತು ಅನಿತಾ ಮೂರುವರ್ಷಗಳ ಹಿಂದೆ ಮದುವೆಯಾದರೂ ಮದುವೆಯಾದ ಕೇವಲ ಒಂದು ವರ್ಷದ ತರುವಾಯ ಆತ ಆಕೆಗೆ ತೊಂದರೆ ಕೊಡಲು ಪ್ರಾರಂಭಿಸಿದ. ಅವಳನ್ನು ಹೊಡೆಯುತ್ತಿದ್ದ. ಕ್ರಮೇಣ ಅವರು ಗಂಡ ಹೆಂಡತಿಯರ ನಡುವೆ ಇರಬಹುದಾದ ಎಲ್ಲ ಸಂಬಂಧಗಳನ್ನು ನಿಲ್ಲಿಸಿದರು. ಸುರೇಶ ಪರಿತ್ಯಾಗ ಮಾಡಿದ ತಪ್ಪಿತಸ್ಥನಾಗಿದ್ದ. ಅನಿತಾ ಈ ಕಾರಣದ ಮೇಲೆ ವಿವಾಹ ವಿಚ್ಛೇದನ ಪಡೆಯಬಹುದು.

- **ಹಿಂಸೆ:**

ನಿಮ್ಮ ಗಂಡ ನಿಮ್ಮನ್ನು ದೈಹಿಕವಾಗಿ ಅಥವಾ ಮಾನಸಿಕವಾಗಿ ಹಿಂಸಿಸಿದರೆ ನೀವು ವಿವಾಹ ವಿಚ್ಛೇದನ ಕೇಳಬಹುದು. ದೈಹಿಕ ಹಿಂಸೆ ಎಂದರೆ ಹೊಡೆಯುವುದು ಹಾಗೂ ದೈಹಿಕವಾಗಿ ಚಿತ್ರಹಿಂಸೆ ನೀಡುವುದು. ಮಾನಸಿಕ ಹಿಂಸೆ ಎಂದರೆ ಒಂದೇ ಸಮನೆ ಅಪನಂಬಿಕೆ ಪಡುವುದು, ಕೆಟ್ಟ ನಡತೆಯನ್ನು ಆರೋಪಿಸುವುದು. ವರದಕ್ಷಿಣೆಗಾಗಿ ಹಿಂಸಿಸುವುದು ಕೂಡಾ






ಹಿಂಸೆಯೇ. ಹಾಗಾಗಿ ಹಿಂಸೆ ಎಂದರೆ ಬರೇ ಹೊಡೆಯುವುದು ಎಂದಿಷ್ಟೇ ಅರ್ಥ ಅಲ್ಲ. ಕಾರಣವಿದ್ದೊ, ಇಲ್ಲದೆಯೋ ನೀಡುವ ಯಾವುದೇ ರೀತಿಯ ತೊಂದರೆಯನ್ನ ಹಿಂಸೆ ಎನ್ನಬಹುದಾಗಿದೆ.

ಮಹೇಶನೊಂದಿಗೆ ಮೀನಾಳ ಮದುವೆ ಆಯಿತು. ಕೆಲವು ದಿನಗಳಾದ ಮೇಲೆ ಮಹೇಶ ಮೀನಾಳನ್ನು ಹೊಡೆಯಲಾರಂಭಿಸಿದ. ವರದಕ್ಷಿಣೆಗಾಗಿ ಕಟು ನುಡಿಗಳನ್ನಾಡತೊಡಗಿದ. ಅವಳ ಚಾರಿತ್ರ್ಯದ ಬಗ್ಗೆ ಹೀನಾಯವಾಗಿ ಮಾತನಾಡಲಾರಂಭಿಸಿದ. ಅವಳು ಮನೆಯಿಂದಾಚೆ ಹೋಗದಂತೆ ನಿರ್ಬಂಧಿಸಿದ. ಇದೆಲ್ಲಾ ಅಸಹನೀಯವಾದಾಗ ಮೀನಾ ವಿವಾಹ ವಿಚ್ಛೇದನಕ್ಕಾಗಿ ನ್ಯಾಯಾಲಯದ ಮೊರೆ ಹೊಕ್ಕಳು. ಅವಳ ಪತಿ ಅವಳೊಂದಿಗೆ ಕ್ರೂರವಾಗಿ ವರ್ತಿಸಿದುದರಿಂದ ನ್ಯಾಯಾಲಯವು ಮೀನಾಳಿಗೆ ವಿವಾಹ ವಿಚ್ಛೇದನ ನೀಡಿತು.

- **ಮತಾಂತರ ಅಥವಾ ಸನ್ಯಾಸ**

  ನಿಮ್ಮ ಗಂಡ ಜಾತಿ ಬಿಟ್ಟರೆ ನೀವು ವಿವಾಹ ವಿಚ್ಛೇದನಕ್ಕಾಗಿ ನ್ಯಾಯಾಲಯ ವನ್ನು ಕೋರಬಹುದು. ಆತ ಸನ್ಯಾಸಿಯಾದರೂ ನೀವು ವಿವಾಹ ವಿಚ್ಛೇದನಕ್ಕಾಗಿ ನ್ಯಾಯಾಲಯವನ್ನು ಕೋರಬಹುದು.

- **ಮತಿಭ್ರಮಣೆ:**

  ನಿಮ್ಮ ಗಂಡ ಗುಣಪಡಿಸಲಾಗದಂಥ ಮತಿಭ್ರಮಣೆಗೆ (ಹುಚ್ಚಿಗೆ) ಒಳಗಾಗಿದ್ದರೆ ನೀವು ವಿವಾಹ ವಿಚ್ಛೇದನಕ್ಕಾಗಿ ನ್ಯಾಯಾಲಯವನ್ನು ಕೋರಬಹುದು.

- **ಕುಷ್ಠರೋಗ**

  ಗಂಡನಿಗೆ ಸೋಂಕುಕಾರಕವಾದ ಹಾಗೂ ಗುಣವಾಗದ ರೀತಿಯ ಕುಷ್ಠರೋಗವಿದ್ದರೆ ನೀವು ವಿವಾಹ ವಿಚ್ಛೇದನಕ್ಕಾಗಿ ನ್ಯಾಯಾಲಯವನ್ನು ಕೋರಬಹುದು.

- **ಕಳೆದ 7 ವರ್ಷಗಳಿಂದ ಪತಿಯ ಸುಳಿವು ಸಿಗದಿರುವುದು**

  ಕಳೆದ 7 ವರ್ಷಗಳಿಂದ ನಿಮ್ಮ ಗಂಡನ ಸುಳಿವು ಸಿಗದೇ ಹೋಗಿದ್ದರೆ ನೀವು ವಿವಾಹ ವಿಚ್ಛೇದನಕ್ಕಾಗಿ ನ್ಯಾಯಾಲಯವನ್ನು ಕೋರಬಹುದು.



ಲತಾಳ ಗಂಡ ರಮೇಶ ಕೆಲಸಕ್ಕೆಂದು ಮುಂಬಯಿಗೆ ಹೋದ. ಕೆಲವು ತಿಂಗಳವರೆಗೆ ಪತ್ರ ಬಂದವು. ಅನಂತರ ಅವನ ಕಡೆಯಿಂದ ಯಾವುದೇ ವರ್ತಮಾನವೂ ಇಲ್ಲವಾಯಿತು. ಲತಾ ಅವನಿಗಾಗಿ ಕಾದರೂ ಪ್ರಯೋಜನವಾಗಲಿಲ್ಲ. ಅವನ ತಂದೆತಾಯಿ ಗೆಳೆಯರಿಗೂ ಅವನಿಂದ ಸುದ್ದಿ ಬರಲಿಲ್ಲ. ಗಂಡ ಹೋದ 8 ವರ್ಷಗಳ ಕಾಲ ಲತಾ ಅತ್ತೆಯ ಮನೆಯವರೊಂದಿಗೆ ವಾಸಿಸಿದಳು. ಅವಳ ಸ್ಥಿತಿಯ ಬಗ್ಗೆ ಅವಳ ಮಾವ ಬಹಳ ದುಃಖಿಸಿದರು. ಕಡೆಗೆ ಅವಳ ಜೊತೆ ನ್ಯಾಯಾಲಯಕ್ಕೆ ಹೋಗಿ ಅವಳಿಗೆ ವಿವಾಹ ವಿಚ್ಛೇದನ ಸಿಗುವಲ್ಲಿ ನೆರವಾದರು. ಈಗ ಲತಾ ಮರುಮದುವೆಯಾಗಿ ಸಂತೋಷದಿಂದಿದ್ದಾಳೆ.

- **ಗಂಡ ಅತ್ಯಾಚಾರಿಯಾಗಿದ್ದರೆ, ವಿಕೃತಕಾಮಿಯಾಗಿದ್ದರೆ ಅಥವಾ ವಿಶಯಲಂಪಟನಾಗಿದ್ದರೆ**

  ಇಂತಹ ಸಂದರ್ಭಗಳಲ್ಲಿ ನೀವು ವಿವಾಹ ವಿಚ್ಛೇದನಕ್ಕಾಗಿ ಕೇಳಬಹುದು.

- **ಬಾಲ್ಯವಿವಾಹದ ನಿರಾಕರಣೆ:**

  ನಿಮಗೆ 15 ವರ್ಷ ವಯಸ್ಸಾಗುವುದಕ್ಕೆ ಮುಂಚೆಯೇ ವಿವಾಹವಾಗಿದ್ದರೆ, 15 ವರ್ಷ ವಯಸ್ಸಾದ ನಂತರ 18 ವರ್ಷ ತುಂಬುವುದರೊಳಗಾಗಿ ನೀವು ವಿಚ್ಛೇದನಕ್ಕಾಗಿ ಕೇಳಬಹುದು.

ಗೌರಿ ಇನ್ನೂ 12 ವರ್ಷದವಳಿರುವಾಗಲೇ ಅವಳ ತಾಯ್ತಂದೆಯರು ಅವಳಿಗೆ ಮದುವೆ ಮಾಡಿದರು. ಗೌರಿ ಓದುತ್ತಿದ್ದುದರಿಂದ ಗಂಡನ ಮನೆಗೆ ಹೋಗಲಿಲ್ಲ. ತಾಯ್ತಂದೆಯವರೊಂದಿಗೆ ಇದ್ದು ಹತ್ತನೆಯ ತರಗತಿಯವರೆಗೆ ಓದಿದಳು. ಅವಳಿಗೆ ಕ್ರಮೇಣ ತನ್ನ ಪತಿಯಾದವನು ದಡ್ಡ ಹಾಗೂ ನಿರುಪಯುಕ್ತ ಎಂದು ತಿಳಿಯಿತು. ತಾನು ಮತ್ತೂ ಓದಬೇಕು ಮುಂದುವರೆಯಬೇಕು ಎಂಬ ಅಭಿಲಾಶೆಯಾಯಿತು. ಈ ವಿಷಯಗಳನ್ನೆಲ್ಲಾ ಅವಳು ತನ್ನ ಮೇಡಂಗೆ ತಿಳಿಸಿದಳು. ಉಪಾಧ್ಯಾಯನಿಯ ಗಂಡ ವಕೀಲರು. ಗೌರಿ ವಿವಾಹ ವಿಚ್ಛೇದನ ಪಡೆಯಲು ಅವರು ಸಹಾಯ ನೀಡಿದರು.

**ಹದಿನೆಂಟು ವರ್ಷದೊಳಗಿನ ಅಪ್ರಾಪ್ತ ಬಾಲಕಿಯೊಂದಿಗೆ ಮದುವೆ ಒಂದು ಅಪರಾಧ.**
**15 ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗಿಯೊಂದಿಗೆ**
**ಲೈಂಗಿಕ ಸಂಪರ್ಕ ಅತ್ಯಾಚಾರ ಎನಿಸಿಕೊಳ್ಳುತ್ತದೆ.**
**ಅತ್ಯಾಚಾರ ಒಂದು ಅಪರಾಧ.**

ಬಾಲ್ಯವಿವಾಹದ ನಿರಾಕರಣೆ









- **ಪರಸ್ಪರ ಒಪ್ಪಿಗೆಯಿಂದ ವಿವಾಹ ವಿಚ್ಛೇದನ :**

ಕೆಲವು ಬಾರಿ ತಮ್ಮ ದಾಂಪತ್ಯ ಯಶಸ್ವಿಯಾಗದೆಂದು ಗಂಡ ಹೆಂಡತಿ ಇಬ್ಬರಿಗೂ ಅನ್ನಿಸಿಬಿಡುತ್ತದೆ. ವಿರಸದ ಬಾಳನ್ನು ಬಾಳುವ ಬದಲು ವಿಚ್ಛೇದನ ಪಡೆಯುವುದೆಂದು ಅವರಿಬ್ಬರೂ ಬಯಸುತ್ತಾರೆ. ಇಂಥ ಸಂದರ್ಭಗಳಲ್ಲಿ ನ್ಯಾಯಾಲಯಕ್ಕೆ ಯಾವುದೇ ಕಾರಣ ನೀಡುವ ಅಗತ್ಯವಿರುವುದಿಲ್ಲ. ಗಂಡ ಹೆಂಡತಿ ಸೇರಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕು. ಅರ್ಜಿಯನ್ನು ಕೊಡುವುದಕ್ಕೆ ಮುಂಚೆ ಗಂಡ ಹೆಂಡತಿ ಕನಿಷ್ಠ ಒಂದು ವರ್ಷದವರೆಗೆ ಪ್ರತ್ಯೇಕವಾಗಿ ಬಾಳಿರಬೇಕು. ಅವರಿಗೆ ನಿಜವಾಗಿಯೂ ಮದುವೆ




ಮುರಿಯುವುದು ಅಗತ್ಯವೇ ಎಂದು ನ್ಯಾಯಾಲಯ ಪ್ರಶ್ನಿಸಿ ಖಾತ್ರಿ ಪಡಿಸಿಕೊಳ್ಳುತ್ತದೆ. ಅವರಿಬ್ಬರಲ್ಲಿ ಯಾರೂ ಒತ್ತಾಯ ಅಥವಾ ಬಲಾತ್ಕಾರಕ್ಕೆ ಒಳಪಟ್ಟಿಲ್ಲ ಎಂದು ನ್ಯಾಯಾದೀಶರು ಮನವರಿಕೆ ಮಾಡಿಕೊಳ್ಳುತ್ತಾರೆ. ಇದರ ಹೊರತಾಗಿ ಇನ್ನಾವುದೇ ಕಾರಣವನ್ನು ನ್ಯಾಯಾಲಯ ಕೇಳುವುದಿಲ್ಲ. ಈ ರೀತಿ ದಂಪತಿಗಳು ನ್ಯಾಯಾಲಯದಲ್ಲಿ ಪರಸ್ಪರರಿಂದ ನಿಂದೆಯ ಮಾತು ಕೇಳುವ ಕಹಿ ಪ್ರಸಂಗದಿಂದ ಪಾರಾಗಬಹುದಾಗಿದೆ.

# ವಿವಾಹ ವಿಚ್ಛೇದನ ಪಡೆಯಲು ಇರುವ ಕಾರ್ಯವಿಧಾನ

ಗಂಡನಿಂದ ವಿವಾಹ ವಿಚ್ಛೇದನ ಪಡೆಯಬಯಸುವ ಹೆಂಗಸು ಕೆಲವು ಮಹತ್ವದ ಅಂಶಗಳನ್ನು ನೆನಪಿನಲ್ಲಿಡಬೇಕು.

- ಅವಳಿಗೆ ಆತ್ಮವಿಶ್ವಾಸ ಅಗತ್ಯ. ಅವಳು ತನಗೆ ನೆರವಾಗಬಲ್ಲ ನೆಂಟರು, ಇಷ್ಟರು ಅಥವಾ ತಾಯ್ತಂದೆಯರಿಂದ ಸಲಹೆ ಪಡೆಯಬೇಕು.
- ನೆರವಾಗಬಲ್ಲ ನೆಂಟರು ಅಥವಾ ಸ್ನೇಹಿತರು ಇಲ್ಲದಿದ್ದರೆ ಅವಳು ಸಾಮಾಜಿಕ ಕಾರ್ಯಕರ್ತರ ಅಥವಾ ಸಮಾಜಸೇವಾ ಸಂಸ್ಥೆಯ ಸಹಾಯವನ್ನು ಪಡೆಯಬಹುದು. ಗಂಡನೊಂದಿಗೆ ರಾಜಿಮಾಡಿಕೊಳ್ಳುವಲ್ಲಿ ಅವರು ಅವಳಿಗೆ ಸಹಾಯ ಮಾಡುವರು. ಅದು ಯಶಸ್ವಿಯಾಗದಿದ್ದರೆ ಕಾನೂನು ವ್ಯವಹರಣೆಯ ಮೂಲಕ ಸಹಾಯ ಮಾಡುವರು.
- ವಿವಾಹ ವಿಚ್ಛೇದನವನ್ನು ಪಡೆಯಲು, ಸಂಬಂಧಪಟ್ಟ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಬೇಕು. ಇದಕ್ಕಾಗಿ ಆಕೆ ವಕೀಲರ ನೆರವು ಪಡೆಯಬಹುದು ಅಥವಾ ತಾನೇ ನೇರವಾಗಿ ನ್ಯಾಯಾಲಯಕ್ಕೆ ಅರ್ಜಿ ನೀಡಬಹುದು.
- ನ್ಯಾಯಾಲಯಕ್ಕೆ ಹೋಗಲು ಆಕೆ ಭಯಪಡಬೇಕಿಲ್ಲ. ನ್ಯಾಯಾಲಯವು ಸಹಾಯ ನೀಡಲಿಕ್ಕಾಗಿಯೇ ಇದೆ ಮತ್ತು ಸಾಧ್ಯವಾದಷ್ಟು ಆಕೆಗೆ ಸಹಾಯ ಮಾಡಲು ಪ್ರಯತ್ನಿಸುತ್ತದೆ. ಮೊದಲು ನ್ಯಾಯಾಲಯವು ಗಂಡ ಹೆಂಡಿರ ನಡುವೆ ರಾಜಿ ಮಾಡಿಸಲು ಯತ್ನಿಸುತ್ತದೆ. ಅದು ಸಾಧ್ಯವಾಗದಿದ್ದರೆ ವಿಚ್ಛೇದನ ನೀಡುತ್ತದೆ.
- ಸರ್ಕಾರವು ಕಾನೂನು ನೆರವು ಸಮಿತಿಗಳನ್ನು ಸ್ಥಾಪಿಸಿದ್ದು ಅಲ್ಲಿ ಉಚಿತ ಕಾನೂನು ಸಲಹೆ ಸಿಗುತ್ತದೆ.
- ಆಕೆ ಬಯಸಿದರೆ ನ್ಯಾಯಾಲಯದಲ್ಲಿನ ವ್ಯವಹಾರಗಳನ್ನು ಗುಪ್ತವಾಗಿ ನಡೆಸಲಾಗುವುದು. ಎಂದರೆ ಜನರ ಎದುರಿನಲ್ಲಿ ಬಹಿರಂಗವಾಗಿ ವಿಚಾರಣೆ ನಡೆಸುವುದಿಲ್ಲ. ಇದರಿಂದ ನಿಮ್ಮ ಖಾಸಗಿ ಜೀವನದ ವಿವರಗಳು ರಟ್ಟಾಗದೇ ಉಳಿಯುತ್ತದೆ.

ಒಬ್ಬ ಲಾಯರನ್ನು ಸಂಪರ್ಕಿಸಿ



- ವಿವಾಹ ವಿಚ್ಛೇದನಕ್ಕಾಗಿ ಅರ್ಜಿ ಸಲ್ಲಿಸಲು ವಿವಾಹವಾಗಿ ಕನಿಷ್ಠಪಕ್ಷ ಒಂದು ವರ್ಷ ಆಗಿರಬೇಕು. ಆದರೂ ಕೆಲವು ಅಪರೂಪದ ತೊಂದರೆಗಳಿರುವಾಗ ನ್ಯಾಯಾಲಯವು ನಿಗದಿತ ಅವಧಿಗೆ ಮುಂಚಿತವಾಗಿ ಅರ್ಜಿಯನ್ನು ಅಂಗೀಕರಿಸಬಹುದು.

**ಅರ್ಜಿಯನ್ನು ಈ ಮುಂದೆ ತಿಳಿಸಲಾದ ಯಾವುದೇ ಸ್ಥಳದಲ್ಲಿನ ಜಿಲ್ಲಾ ನ್ಯಾಯಾಲಯದಲ್ಲಿ ಸಲ್ಲಿಸಬಹುದು.**

- ಮದುವೆ ನಡೆದ ಸ್ಥಳ
- ಗಂಡ ಹೆಂಡತಿ ಕೊನೆಗೆ ಒಟ್ಟಾಗಿ ಬದುಕಿದ್ದ ಸ್ಥಳ
- ಇಬ್ಬರಲ್ಲಿ ಎದುರುಪಕ್ಷ ವಾಸಿಸುವ ಸ್ಥಳ
- ಅರ್ಜಿದಾರರ ವಾಸಸ್ಥಳ. ಆದರೆ ಇನ್ನೊಬ್ಬ ಪಕ್ಷಕಾರ ವಿದೇಶದಲ್ಲಿದ್ದರೆ ಮಾತ್ರ ಇದು ಸಾಧ್ಯ.
- ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದ ತರುವಾಯ ಪ್ರತಿಪಕ್ಷಕಾರನಿಗೆ ನೋಟೀಸು ನೀಡಲಾಗುತ್ತದೆ. ಎರಡೂ ಪಕ್ಷಗಳ ಅಹವಾಲನ್ನು ಕೇಳಿ, ಸಾಕ್ಷಿದಾರರು ಹಾಗೂ ಸಾಕ್ಷ್ಯಗಳನ್ನು ಪರೀಕ್ಷಿಸಿ, ವಿವಾಹ ವಿಚ್ಛೇದನಕ್ಕೆ ಅವಕಾಶ ನೀಡಬೇಕೇ ಬೇಡವೇ ಎಂಬುದನ್ನು ನ್ಯಾಯಾಲಯವು ನಿರ್ಧರಿಸುತ್ತದೆ.

**ಕೆಲವು ಜಾತಿಗಳಲ್ಲಿ ಹಾಗೂ ಕೋಮುಗಳಲ್ಲಿ ಗ್ರಾಮದ ಅಥವಾ ಜಾತಿಯ ಪಂಚಾಯತಿಯು ವಿವಾಹ ವಿಚ್ಛೇದನೆಯ ತೀರ್ಪು ನೀಡುತ್ತದೆ. ಈ ಪ್ರಕಾರದ ವಿವಾಹ ವಿಚ್ಛೇದನೆಗೆ ಸಂಬಂಧಿಸಿದ್ದಂತೆ ಕೆಲವು ಗಮನಾರ್ಹ ಅಂಶಗಳಿವೆ:**

- ಗ್ರಾಮ ಅಥವಾ ಜಾತಿಯ ಪಂಚಾಯತಿಯಿಂದ ವಿವಾಹ ವಿಚ್ಛೇದನ ನೀಡುವ ಸಂಪ್ರದಾಯ ಅಲ್ಲಿ ಜಾರಿಯಲ್ಲಿರಬೇಕು.
- ವಿವಾಹ ವಿಚ್ಛೇದನೆಗೆ ಗಂಡ ಹೆಂಡತಿ ಇಬ್ಬರದ್ದೂ ಒಪ್ಪಿಗೆ ಇರಬೇಕು. ಒಂದೇ ಪಕ್ಷದ ಕೇಳಿಕೆಯ ಮೇರೆಗೆ ಪಂಚಾಯತಿಯು ವಿಚ್ಛೇದನೆಗೆ ಅವಕಾಶ ನೀಡಬಾರದು.
- ವಿಚ್ಛೇದನೆಯ ತೀರ್ಪು ನೀಡುವುದಕ್ಕೆ ಮುಂಚೆ ಪಂಚಾಯತಿಯು ಎರಡೂ ಕಡೆಯವರ ಅಹವಾಲನ್ನು ಕೇಳಬೇಕು.
- ಪಂಚಾಯತಿಯು ಒಂದು ಪಕ್ಷದವರ ಸಮ್ಮತಿಯಿಲ್ಲದೆ ವಿಚ್ಛೇದನೆಯ ತೀರ್ಪು ನೀಡಿದ್ದರೆ ಅಥವಾ ಇನ್ನಾವುದೇ ಅನ್ಯಾಯ ಘಟಿಸಿದ್ದರೆ ನ್ಯಾಯಾಲಯದಲ್ಲಿ ಪ್ರಕರಣವನ್ನು ದಾಖಲು ಮಾಡಬಹುದು.



**ಸಮಾಜಸೇವಾ ಕಾರ್ಯಕರ್ತರ ನೆರವು ಪಡೆಯಿರಿ**

# ಜೀವನಾಂಶ

ನಮ್ಮ ಸಮಾಜದಲ್ಲಿ ಹೆಂಗಸು ಹೆಚ್ಚಾಗಿ ಪರಾವಲಂಬಿ. ಆಕೆ ಜೀವನ ನಿರ್ವಹಣೆಗೆ ಗಂಡನನ್ನೇ ಅವಲಂಬಿಸಬೇಕಾಗಿದೆ. ಮದುವೆಗೆ ಮುಂಚೆ ಆಕೆ ತಂದೆಯನ್ನ ಅವಲಂಬಿಸುತ್ತಾಳೆ. ಮದುವೆಯ ನಂತರ ಅವಳನ್ನ ಗಂಡ ಸಂರಕ್ಷಿಸುತ್ತಾನೆ. ಮದುವೆ ಮುರಿದರೆ ಬೀದಿ ಪಾಲಾಗಬೇಕಾದೀತೆಂಬ ಭಯದಿಂದ ಹೆಂಗಸು ಗಂಡಂದಿರಿಂದ ಮತ್ತೆ ಮತ್ತೆ ತೊಂದರೆಗಳನ್ನು ಅನುಭವಿಸುತ್ತಲೇ ಇರುತ್ತಾರೆ. ಕೆಲವು ಗಂಡಸರು ಹೆಂಡತಿಯನ್ನ ತೊರೆಯುತ್ತಾರೆ ಅಥವಾ ವಿಚ್ಛೇದನ ನೀಡುತ್ತಾರೆ. ಕೆಲವು ವೇಳೆ ಒಟ್ಟಿಗೆ ಜೀವಿಸುತ್ತಿರುವಾಗಲೂ ಅನೇಕರು ತಮ್ಮ ಮಕ್ಕಳಿಗೆ ಅಗತ್ಯ ಸೌಕರ್ಯಗಳನ್ನು ಕಲ್ಪಿಸುವುದಿಲ್ಲ. ಅಂಥ ಪರಿಸ್ಥಿತಿಯಲ್ಲಿ ಹೆಂಗಸು ನಿರ್ಗತಿಕಳು ಹಾಗೂ ನಿಸ್ಸಹಾಯಕಳು ಆಗಬಾರದೆಂಬ ಉದ್ದೇಶದಿಂದ ಗಂಡ ಜೀವನಾಂಶ ನೀಡಬೇಕೆಂದು ಕಾನೂನಿನಲ್ಲಿ ಉಪಬಂಧ ಕಲ್ಪಿಸಲಾಗಿದೆ. ಧರ್ಮ ಯಾವುದೇ ಇದ್ದರೂ ಹೆಂಗಸು ಜೀವನಾಂಶ ಪಡೆಯಲು ಹಕ್ಕುಳ್ಳವಳಾಗಿದ್ದಾಳೆ.

**ಜೀವನಾಂಶ ಎಂದರೇನು ?**

ಜೀವನನಿರ್ವಹಣೆಯ ಆಧಾರ ಇಲ್ಲದಾಗ ತನ್ನ ಅಗತ್ಯಗಳನ್ನ ಪೂರೈಸಿಕೊಳ್ಳಲೆಂದು ಹೆಂಡತಿ ಗಂಡನಿಂದ ಹಣ ಪಡೆಯುವ ಹಕ್ಕು ಹೊಂದಿದ್ದಾಳೆ. ಇದೇ ಹಕ್ಕು ವಿಚ್ಛೇದಿತ ಹೆಂಡತಿಗೂ ಕಾನೂನಿನ ಮೂಲಕ ಒದಗಿಸಲಾಗಿದೆ. ವಿಚ್ಛೇದಿತ ಹೆಂಡತಿಗೆ ಜೀವನಾಂಶ ಸಿಗಬೇಕು.

**ಜೀವನಾಂಶವನ್ನು ಯಾರು ಕೊಡುತ್ತಾರೆ ?**

ವಿವಾಹ ವಿಚ್ಛೇದನೆಯ ತರುವಾಯ ಗಂಡನು ಹೆಂಡತಿಗೆ ಜೀವನಾಂಶವನ್ನು ನೀಡಬೇಕೆಂದು ನ್ಯಾಯಾಲಯವು ಆದೇಶವನ್ನು ನೀಡುತ್ತದೆ.

**ಒಬ್ಬ ಹೆಂಡತಿಯು ಎಷ್ಟು ಜೀವನಾಂಶವನ್ನು ಪಡೆಯಬಹುದು ?**

ಅವಳು ತನ್ನ ಜೀವನಮಟ್ಟಕ್ಕನುಗುಣವಾಗಿ ಜೀವಿಸಲು ಅಗತ್ಯವಿರುವಷ್ಟು ಜೀವನಾಂಶವನ್ನು ಆಕೆ ಪಡೆಯಬಹುದು.



ಗಂಡನ ಗಳಿಕೆ ಸಾಮರ್ಥ್ಯದ ಮೇಲೆ ಜೀವನಾಂಶದ ಮಿತಿ ನಿರ್ಧಾರವಾಗುತ್ತದೆ.

**ಮಹಿಳೆ ಈ ಮೊತ್ತವನ್ನು ಪಡೆಯುವ ಬಗೆ ಹೇಗೆ ?**

ಈ ಮೊತ್ತವನ್ನು ಮಾಸಿಕವಾಗಿ ಅಥವಾ ಇಡಿಗಂಟಾಗಿ ನೀಡಬಹುದು. ಇದನ್ನು ಹೆಂಗಸಿನ ಜೀವಮಾನ ಪೂರ್ತಿ ನೀಡಲಾಗುತ್ತದೆ.

**ಹೆಂಗಸು ಮರುವಿವಾಹವಾದರೆ ಅವಳಿಗೆ ಈ ಮೊತ್ತ ಸಿಗುವುದು ಮುಂದುವರಿಯುವುದೇ ?**

ಇಲ್ಲ, ಅವಳು ಮತ್ತೆ ಮದುವೆಯಾದರೆ ಅಥವಾ ತನ್ನ ಚಾರಿತ್ರ್ಯವನ್ನ ಕಾಪಾಡಿಕೊಳ್ಳದಿದ್ದರೆ ಜೀವನಾಂಶದ ಸಂದಾಯವನ್ನು ನಿಲ್ಲಿಸಲಾಗುವುದು.

**ಈ ಮೊತ್ತವನ್ನು ಯಾವ ನ್ಯಾಯಾಲಯ ನೀಡುತ್ತದೆ ?**

ವಿವಾಹ ವಿಚ್ಛೇದನೆಯ ತೀರ್ಪು ನೀಡಿದ ನ್ಯಾಯಾಲಯವೇ ಈ ಮೊತ್ತವನ್ನು ಕೊಡುವ ಬಗ್ಗೆಯೂ ಆದೇಶ ನೀಡಬಹುದು. ವಿವಾಹ ವಿಚ್ಛೇದನದ ವ್ಯವಹಾರಗಳು ನಡೆಯುತ್ತಿರುವಾಗಲೇ ಜೀವನಾಂಶಕ್ಕಾಗಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕು. ವ್ಯವಹರಣೆಯು ನಡೆಯುತ್ತಿರುವಾಗ ಕೂಡ ನ್ಯಾಯಾಲಯವು ಆ ಅವಧಿಗಾಗಿ ಹಾಗೂ ವಿಚ್ಛೇದನದ ನಂತರದ ಜೀವನಕ್ಕಾಗಿ ಜೀವನಾಂಶವನ್ನು ನೀಡಬೇಕೆಂದು ಆದೇಶ ನೀಡಬಹುದು.

ಕ್ರಿಮಿನಲ್ ನ್ಯಾಯಾಲಯವು ಜೀವನಾಂಶಕ್ಕೆ ಆದೇಶ ನೀಡಬಹುದು. ಕ್ರಿಮಿನಲ್ ನ್ಯಾಯಾಲಯದಲ್ಲಿ ವ್ಯವಹರಣೆಗಳು ತ್ವರಿತವಾಗಿ ನಡೆಯುತ್ತವೆ. ಆದ್ದರಿಂದ ಹೆಂಗಸು ತನಗೆ ಜೀವನಾಧಾರವೇನೂ ಇಲ್ಲದಿದ್ದರೆ **ದಂಡ ಪ್ರಕ್ರಿಯಾ ಸಂಹಿತೆಯ 125ನೇ** ಪ್ರಕರಣದ ಅಡಿಯಲ್ಲಿ ಜೀವನಾಂಶಕ್ಕಾಗಿ ಒಂದು ಅರ್ಜಿಯನ್ನು ಸಲ್ಲಿಸಬೇಕು.

**ಕ್ರಿಮಿನಲ್ ನ್ಯಾಯಾಲಯದಲ್ಲಿ ಅರ್ಜಿಯನ್ನು ಹೇಗೆ ಸಲ್ಲಿಸಬೇಕು ?**

ಈ ಅರ್ಜಿಯನ್ನು ಸಲ್ಲಿಸಲು ನೀವು ವಕೀಲರ ನೆರವು ಪಡೆಯಬೇಕು. ತೀರಾ ಅಗತ್ಯವಿರುವವರಿಗೆ ಸಹಾಯ ಮಾಡಲೆಂದೇ ನ್ಯಾಯಾಲಯಗಳಲ್ಲಿ ಕಾನೂನು ನೆರವು ಘಟಕಗಳಿರುತ್ತವೆ. ಈ ಘಟಕಗಳಿಂದ ನೀವು ಉಚಿತ ಕಾನೂನು ನೆರವು ಪಡೆಯಬಹುದು. ಅರ್ಜಿಯಲ್ಲಿ, ಜೀವನಾಂಶಕ್ಕೆ ನಿಮಗೆ ಹಕ್ಕು ದೊರಕಿಸಿಕೊಡುವ ಎಲ್ಲ ವಾಸ್ತವಾಂಶಗಳನ್ನು ನಮೂದಿಸಿರಬೇಕು. ಗಂಡನು ನಿಮ್ಮನ್ನು ನೋಡಿಕೊಳ್ಳದಿರುವ ಬಗ್ಗೆ, ನಿಮ್ಮನ್ನು ನೀವು ನೋಡಿಕೊಳ್ಳಲು ಅಸಮರ್ಥರಾಗಿರುವ ಬಗ್ಗೆ, ನಿಮ್ಮನ್ನು ನೋಡಿಕೊಳ್ಳಲು ನಿಮ್ಮ ಗಂಡನ ಬಳಿ ಸಾಕಷ್ಟು ಸಾಧನಸಾಮರ್ಥ್ಯವಿರುವ ಬಗ್ಗೆ ತಿಳಿಸಬೇಕು. ನಿಮ್ಮ ಗಂಡನ ಗಳಿಕೆ ಮತ್ತು ಇತರ ಸ್ವತ್ತುಗಳ ಬಗ್ಗೆ ತಿಳಿಸಬೇಕು.

**ಕ್ರಿಮಿನಲ್ ನ್ಯಾಯಾಲಯದಿಂದ ಒಬ್ಬ ಹೆಂಗಸು ಎಷ್ಟು ಜೀವನಾಂಶವನ್ನು ಪಡೆಯಬಹುದು ?**

ಕ್ರಿಮಾನಲ್ ನ್ಯಾಯಾಲಯವು 500 ರೂ.ಗಳವರೆಗೆ ಮಾತ್ರ ಜೀವನಾಂಶ ನೀಡಬಹುದು.

**ಆದೇಶ ಬಂದಮೇಲೂ ಗಂಡನು ಜೀವನಾಂಶವನ್ನು ಸಂದಾಯ ಮಾಡದಿದ್ದರೆ ಏನು ಮಾಡಬೇಕು ?**

ನ್ಯಾಯಾಲಯದ ಆದೇಶವಿದ್ದರೂ ಗಂಡನು ಜೀವನಾಂಶವನ್ನು ಕೊಡದಿದ್ದರೆ ನೀವು ಆ ಬಗ್ಗೆ ನ್ಯಾಯಾಲಯಕ್ಕೆ ತಿಳಿಸಬೇಕು. ಕ್ರಿಮಿನಲ್ ನ್ಯಾಯಾಲಯವು ಆತನನ್ನು ಸೆರೆಮನೆಗೆ ಕಳುಹಿಸಬಹುದು. ನ್ಯಾಯಾಲಯವು ಆತನ ಆಸ್ತಿಯ ಜಪ್ತಿಗೆ ಆದೇಶ ನೀಡಬಹುದು.

# ಮಕ್ಕಳ ಅಭಿರಕ್ಷೆ

**ವಿಚ್ಛೇದನದ ತರುವಾಯು ಮಕ್ಕಳ ಪರಿಸ್ಥಿತಿ ಏನು ?**

ವಿವಾಹ ವಿಚ್ಛೇದನೆಯ ತರುವಾಯ ಪತಿ ಪತ್ನಿಯರು ಪ್ರತ್ಯೇಕವಾಗಿ ಬದುಕತೊಡಗುತ್ತಾರೆ. ಆದರೆ ಮಕ್ಕಳ ಸಂಬಂಧವಾದ ಸಮಸ್ಯೆ ಉದ್ಭವಿಸುತ್ತದೆ. ಅವರು ಯಾರೊಂದಿಗೆ ಇರಬೇಕು ? ಅವರ ಜೀವನ ನಿರ್ವಹಣೆಗೆ ಯಾರು ಮತ್ತು ಎಲ್ಲಿಯವರೆಗೆ ಹಣ ಕೊಡುತ್ತಾರೆ ?

ಮಕ್ಕಳ ಅಭಿರಕ್ಷೆಯ ಸಮಸ್ಯೆ ಪರಿಹರಿಸಿರೆಂದು ಕೋರಿ ಪತಿ ಅಥವಾ ಪತ್ನಿ, **ಪೋಷಕರು ಮತ್ತು ಮಕ್ಕಳ ಅಧಿನಿಯಮದ** ಅಡಿಯಲ್ಲಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕಾಗುತ್ತದೆ.

**ಮಕ್ಕಳು ಯಾರ ಬಳಿ ಇರಬೇಕೆಂಬುದನ್ನು ನ್ಯಾಯಾಲಯವು ಹೇಗೆ ನಿರ್ಧರಿಸುತ್ತದೆ ?**

- ಮಕ್ಕಳು ಕನಿಷ್ಠ ಪಕ್ಷ ಐದು ವರ್ಷದವರಾಗುವವರೆಗೆ ಅವರ ಅಭಿರಕ್ಷೆಯ ಹಕ್ಕನ್ನು ತಾಯಿ ಹೊಂದಿರುತ್ತಾಳೆ.
- ಎಲ್ಲ ಸಂದರ್ಭಗಳಲ್ಲಿ ನ್ಯಾಯಾಲಯವು ಮಕ್ಕಳ ಒಳಿತನ್ನು ಗಮನದಲ್ಲಿಟ್ಟುಕೊಳ್ಳುತ್ತದೆ. ಎಲ್ಲ ಸನ್ನಿವೇಶಗಳನ್ನು ದೃಷ್ಟಿಯಲ್ಲಿರಿಸಿಕೊಂಡು ನ್ಯಾಯಾಲಯವು ಮಗು ತಾಯಿಯ ಬಳಿ ಇರಬೇಕೇ ಅಥವಾ ತಂದೆಯ ಬಳಿ ಇರಬೇಕೇ ಎಂಬುದನ್ನು ನಿರ್ಧರಿಸುತ್ತದೆ.

**ಮಕ್ಕಳ ಒಳಿತು ಎಂದರೇನು ?**

ಮಕ್ಕಳ ಒಳಿತು ಎಂದರೆ ಮಗುವಿನ ಭೌತಿಕ ಮತ್ತು ಭಾವನಾತ್ಮಕ ಅಗತ್ಯಗಳನ್ನು ಯಾರು ಉತ್ತಮವಾಗಿ ನೋಡಿಕೊಳ್ಳಬಲ್ಲರು ಎಂಬುದು.

**ತಾಯಿಗೆ ಸ್ವಾವಲಂಬನೆಯ ಮಾರ್ಗ ಯಾವುದೂ ಇಲ್ಲದಿದ್ದರೆ ಅವಳಿಗೆ ಮಗುವನ್ನು ಕೊಡುವುದಿಲ್ಲವೆ?**

ಮಗುವಿನ ಒಳಿತಿನ ದೃಷ್ಟಿಯಿಂದ ಒಂದೊಮ್ಮೆ ತಾಯಿಯು ಮಗುವನ್ನ ನೋಡಿಕೊಳ್ಳಲು ಆರ್ಥಿಕವಾಗಿ ಅಸಮರ್ಥಳಾದರೂ ಮಗುವನ್ನು ಅವಳಿಗೆ ಕೊಡಲಾಗುತ್ತದೆ. ಮಕ್ಕಳು ತನ್ನೊಂದಿಗೆ ವಾಸಿಸದಿದ್ದರೂ ತಂದೆಯು ಅವರ ಪೋಷಣೆಗೆ ಹಣವನ್ನು ನೀಡಬೇಕಾಗುತ್ತದೆ.

**ತಾಯಿಯು ಕುಲಟೆಯಾಗಿರುವುದರಿಂದ ಮಕ್ಕಳನ್ನು ಅವಳಿಗೆ ನೀಡಬಾರದೆಂದು ನ್ಯಾಯಾಲಯದಲ್ಲಿ ಬಹುಪಾಲು ಪುರುಷರು ಹೇಳುತ್ತಾರೆ. ನ್ಯಾಯಾಲಯವು ಅವಳಿಗೆ ಮಕ್ಕಳನ್ನು ಕೊಡಲು ನಿರಾಕರಿಸುವುದೇ ?**






- ತಾಯಿಯು ಬಹಳ ನೀತಿಗೆಟ್ಟವಳೆಂದು ಬರೇ ಹೇಳಿದರೆ ಮಾತ್ರ ಸಾಲದು. ಜೊತೆಗೆ ಅವಳು ಪುರುಷರ ಒಡನಾಟದಲ್ಲಿರುವುದು ಕಂಡುಬರುವ ಮಾತ್ರದಿಂದಲೇ ಅವಳು ದುರ್ನಡತೆಯವಳೆಂದು ಅರ್ಥವಲ್ಲ.
- ಮಕ್ಕಳ ಮೇಲೆ ದುಷ್ಪರಿಣಾಮವನ್ನುಂಟು ಮಾಡುವಂಥ ಮಾನಸಿಕ ಅಸ್ವಾಸ್ಥ್ಯ ತಾಯಿಗಿದೆ ಎಂದು ನ್ಯಾಯಾಲಯಕ್ಕೆ ಮನದಟ್ಟಾದರೆ ಮಗುವಿನ ಅಭಿರಕ್ಷೆಯನ್ನು ಅವಳಿಗೆ ಒಪ್ಪಿಸಲು ನಿರಾಕರಿಸುತ್ತದೆ. ಸಾಧ್ಯವಿರುವೆಡೆಗಳಲ್ಲೆಲ್ಲ ನ್ಯಾಯಾಲಯವು ಮಗುವಿನ ಇಚ್ಛೆಯನ್ನು ತಿಳಿಯಲೆತ್ನಿಸುತ್ತದೆ.

# ಆಸ್ತಿಯ ಹಕ್ಕು

ಮೂಲ ಪಾಠ
ಸೌರಭ್ ಆನಂದ್ ಪ್ರಕಾಶ್

ಚಿತ್ರಗಳು
ಮನೋಹರ್

# ಆಸ್ತಿ ಹಕ್ಕು

ನಮ್ಮ ಕಾನೂನು ನಮಗೆ ಆಸ್ತಿಯ ಒಡೆತನದ ಹಕ್ಕು ನೀಡಿದೆ. ಸ್ತ್ರೀ - ಪುರುಷರಿಬ್ಬರಿಗೂ ಆಸ್ತಿಯ ಮೇಲೆ ಹಕ್ಕಿದೆ. ಸರ್ಕಾರದಿಂದ ರಚಿತವಾದ ಕಾನೂನಿನ ಪ್ರಕಾರ:

- ಪ್ರತಿಯೊಬ್ಬ ಮಹಿಳೆಯೂ ತನಗಾಗಿ ತನ್ನ ಹೆಸರಿನಲ್ಲಿ ಆಸ್ತಿಯನ್ನು ಗಳಿಸುವ ಹಾಗೂ ಧಾರಣ ಮಾಡುವ ಹಕ್ಕು ಹೊಂದಿದ್ದಾಳೆ.
- ಒಬ್ಬ ಮಹಿಳೆಗೆ ಆಸ್ತಿ ಇದ್ದರೆ ಅವಳು ಅದನ್ನು ತನ್ನ ಇಚ್ಛಾನುಸಾರ ವಿನಿಯೋಗಿಸಬಹುದು.
- ಒಬ್ಬ ಮಹಿಳೆ ತನ್ನ ಸಂಪಾದನೆಯನ್ನು ತಾನೇ ಸ್ವೀಕರಿಸುವ ಅದನ್ನು ತಾನೇ ಇಟ್ಟುಕೊಂಡು ತನ್ನ ಇಚ್ಛಾನುಸಾರ ವೆಚ್ಚ ಮಾಡುವ ಹಕ್ಕು ಹೊಂದಿರುತ್ತಾಳೆ.
- ಮಹಿಳೆಯರೂ ಪುರುಷನಿಗಿರುವಂತೆಯೇ ಆಸ್ತಿಯನ್ನು ಖರೀದಿಸುವ ಮತ್ತು ಮಾರುವ ಹಕ್ಕು ಹೊಂದಿರುತ್ತಾರೆ.

ಮಹಿಳೆಯರಿಗೂ ಅವರ ತಂದೆ ತಾಯಿಯರ ಅಥವಾ ಇತರ ನೆಂಟರ ಆಸ್ತಿಯಲ್ಲಿ ಪಾಲಿರುತ್ತದೆ. ಅವರ ಪಾಲು ಅವರ ವೈಯಕ್ತಿಕ ಕಾನೂನನ್ನು, ಎಂದರೆ ಅವರ ಧರ್ಮಕ್ಕನುಗುಣವಾದ ಕಾನೂನುಗಳನ್ನು ಅವಲಂಬಿಸಿರುತ್ತದೆ.

### ಆಸ್ತಿಯಲ್ಲಿ ಯಾವ ಯಾವ ವಸ್ತುಗಳು ಸೇರುತ್ತವೆ ?

ಮೀತಾಳ ತಂದೆ ಅವಳ ವಿವಾಹ ಸಂದರ್ಭದಲ್ಲಿ ಅವಳಿಗೆ ಕೆಲವು ಚಿನ್ನದ ಬಳೆಗಳು ಹಾಗೂ ಒಂದು ಹೊಲಿಗೆ ಯಂತ್ರವನ್ನು ಕೊಟ್ಟರು. ಚಿನ್ನದ ಬಳೆಗಳು ಹಾಗೂ ಹೊಲಿಗೆ ಯಂತ್ರ ಮೀತಾಳ ಸ್ವತ್ತಾಗುತ್ತದೆ.

ಅಮೀನಾ ಒಬ್ಬ ಸ್ಥಳೀಯ ವ್ಯಾಪಾರಿಯ ಬೇಡಿಕೆಯ ಮೇರೆಗೆ ಶಾಲುಗಳಿಗೆ ಕಸೂತಿ ಹಾಕುತ್ತಾಳೆ. ಅವನು ಅವಳಿಗೆ ಒಂದು ಶಾಲಿಗೆ ಕಸೂತಿ ಮಾಡುವುದಕ್ಕೆ 50 ರೂ. ಗಳನ್ನು ಕೊಡುತ್ತಾನೆ. ಅಮೀನಾ ಸಂಪಾದಿಸಿದ ಹಣ ಅವಳ ಸ್ವತ್ತು.

ಜಸಬೀರ್ ಕೌರಳ ತಾತ ಅವಳಿಗೆ ತನ್ನ ತುಣುಕು ಕೃಷಿ ಭೂಮಿಯನ್ನು ದಾನವಾಗಿ ಕೊಟ್ಟರು. ಆ ಭೂಮಿ ಅವಳ ಸ್ವತ್ತು.

ಸಾರಾ ಒಂದುಗಿರಣಿಯಲ್ಲಿ ಕೆಲಸ ಮಾಡುತ್ತಾಳೆ. ತಾನು ಸಂಪಾದಿಸಿದ ಹಣದಲ್ಲಿ, ಕಾರ್ಮಿಕರ ಬಡಾವಣೆಯಲ್ಲಿ ಒಂದು ಮನೆಯನ್ನು ಖರೀದಿಸಲು ಅವಳು ನಿರ್ಧರಿಸಿದಳು. ಅವಳ ಪತಿ ಡೇವಿಡ್ ಹೇಳಿದ "ಮನೆ ನನ್ನ ಹೆಸರಿನಲ್ಲಿರಬೇಕು ಏಕೆಂದರೆ ನಾನು ಕುಟುಂಬದ ಯಜಮಾನ" ಆದರೆ ತನ್ನ ಹೆಸರಿನಲ್ಲಿ ಒಂದು ಮನೆಯನ್ನು ಹೊಂದಿರುವ ಹಕ್ಕು ಸಾರಾಳಿಗಿದೆ. ಅವಳಿಗೆ ಅವಳ ಮಕ್ಕಳಿಗೆ ಅದು ಭದ್ರತೆಯಿದ್ದಂತೆ. ಮನೆ ಸಾರಾಳ ಆಸ್ತಿ ಎನಿಸುತ್ತದೆ.

ಆಸ್ತಿಗೆ ಸಂಬಂಧಪಟ್ಟ ವೈಯಕ್ತಿಕ ಕಾನೂನುಗಳನ್ನು ನಾವೀಗ ವಿವರವಾಗಿ ತಿಳಿಯೋಣ.

# ಹಿಂದೂ ಮಹಿಳೆಯ ಆಸ್ತಿ ಹಕ್ಕು

ಮಾಲಾ ಒಬ್ಬ ನ್ಯಾಯವಾದಿ. ಅವಳ ಬಾಲ್ಯ ಸ್ನೇಹಿತೆ ಆಶಾಳ ತಂದೆ ಇತ್ತೀಚೆಗೆ ನಿಧನರಾದರು. ಮಾಲಾ ಸಂತಾಪ ಸೂಚಿಸಲು ಆಶಾಳ ಮನೆಗೆ ಹೋದಳು. ಅವಳು ಆಶಾಳ ಕುಟುಂಬದವರನ್ನು ಭೇಟಿಯಾದಾಗ ಅವರೆಲ್ಲ ಚಿಂತಿತರಾದಂತೆ, ಉದ್ವಿಗ್ನಗೊಂಡಂತೆ ತೋರಿತು. ಆಶಾ ಮಾಲಾಳಿಗೆ ಹೇಳಿದಳು. ''ಅಪ್ಪಾಜಿ ಸತ್ತಮೇಲೆ ನನ್ನ ತಮ್ಮ ಮಾಧವ ಕುಟುಂಬದಲ್ಲಿನ ಮಹಿಳೆಯರನ್ನು ಹೀನಾಯವಾಗಿ ಕಾಣುತ್ತಿದ್ದಾನೆ. ಮನೆನಡೆಸಲು ಅವನು ಸಾಕಷ್ಟು ಹಣ ಕೊಡುತ್ತಿಲ್ಲ. ಎಲ್ಲ ಆಸ್ತಿ ತನಗೇ ಸೇರಿದೆ ಎಂದು ಅವನು ವಾದಿಸುತ್ತಿದ್ದಾನೆ.''



ಮಾಲಾ : ಅಪ್ಪಾಜಿ ಮಾಧವನ ಹೆಸರಿಗೆ ಉಯಿಲು ಮಾಡಿದ್ದರೆ ?

ಆಶಾ : ಉಯಿಲು ಎಂದರೇನು ?

ಮಾಲಾ : ಉಯಿಲು ಒಂದು ದಸ್ತಾವೇಜು. ಸಂಬಂಧಪಟ್ಟ ವ್ಯಕ್ತಿಯು ಅದರಲ್ಲಿ ತನ್ನ ಮರಣದ ನಂತರ ತನ್ನ ಆಸ್ತಿ ಮುಂತಾದವುಗಳನ್ನು ಹೇಗೆ ವಿಲೇವಾರಿ ಮಾಡಬೇಕೆಂಬುದನ್ನು ತಿಳಿಸಿರುತ್ತಾನೆ.


ಮಧೂ ಕುಟುಂಬದ ಸದಸ್ಯರನ್ನು ಹೀನಾಯವಾಗಿ ಕಾಣುತ್ತಾನೆ

ಆಶಾ : ಇಲ್ಲ ಮಾಲಾ. ಅಂಥ ಉಯಿಲನ್ನು ಮಾಡಿಲ್ಲ.

ಮಾಲಾ : ನಿಮ್ಮ ಅಪ್ಪಾಜಿಯ ಆಸ್ತಿ ಸ್ವಯಾರ್ಜಿತವೇ, ಪಿತ್ರಾರ್ಜಿತವೇ ?

ಆಶಾ : ಮಾಲಾ ನಿನಗೇ ಗೊತ್ತಿರುವಂತೆ ನನ್ನ ತಂದೆ ಸ್ಥಿತಿವಂತರೇನಲ್ಲ. ಅವರೊಬ್ಬ ಶಾಲಾ ಶಿಕ್ಷಕರು. ಅವರಿಗೆ ಇದ್ದುದು 3 ಎಕರೆ ತರಿ ಭೂಮಿ ಮತ್ತು ಈ ಮನೆ. 2 ಎಕರೆ ತರಿ ಭೂಮಿ ಮತ್ತು ಈ ಮನೆ ಪಿತ್ರಾರ್ಜಿತ. ಅಂದರೆ, ಅವರ ತಂದೆಯಿಂದ ಬಂದುದು. 3ನೇ ಎಕರೆ ಭೂಮಿಯನ್ನು ಅವರು ತಮ್ಮ ನಿವೃತ್ತಿಯ ಹಣದಿಂದ ಖರೀದಿಸಿದರು.

ಮಾಲಾ : 1956ರ ಹಿಂದೂ ಉತ್ತರಾಧಿಕಾರ ಅಧಿನಿಯಮ ಅಂತ ಒಂದು ಕಾನೂನಿದೆ. ಒಬ್ಬ ಹಿಂದೂ ಸ್ತ್ರೀ ಅಥವಾ ಪುರುಷನ ಮರಣಾನಂತರ ಅವನ ಆಸ್ತಿಯ ಸ್ಥಿತಿಯ ಬಗ್ಗೆ ತಿಳಿಸುತ್ತದೆ. ಕಾನೂನಿನಲ್ಲಿ ಹೇಳಲಾಗಿರುವ ಕೆಲವು ಅಂಶಗಳನ್ನು ನೀನು ತಿಳಿದುಕೊಳ್ಳಬೇಕು.

- ಒಬ್ಬ ಹಿಂದೂ ಪುರುಷನಿಗೆ ಕುಟುಂಬದ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕು ಹುಟ್ಟಿನಿಂದಲೇ ಬರುತ್ತದೆ. ಒಬ್ಬ ಹಿಂದೂ ಪುರುಷನು ತನ್ನ ಪೂರ್ವಜರಿಂದ ಪಡಯುವ ಆಸ್ತಿಯೇ ಪಿತ್ರಾರ್ಜಿತ ಆಸ್ತಿ.

**ಮಾಲಾಳ ತಂದೆಯ ಆಸ್ತಿ**







ಪ್ರತಿಯೊಬ್ಬ ಪುರುಷನು ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲು ಪಡೆಯುತ್ತಾನೆ

- ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕು ಹುಟ್ಟಿನಿಂದ ಬರುವುದಿಲ್ಲ. ಅವರು ತಮ್ಮ ಊಟ, ವಸತಿ, ಬಟ್ಟೆ, ಶಿಕ್ಷಣ ಮತ್ತು ಮದುವೆಯ ವೆಚ್ಚಕ್ಕೆ ಹಣವನ್ನು ಈ ಆಸ್ತಿಯಿಂದ ಪಡೆಯಲು ಮಾತ್ರ ಹಕ್ಕುಳ್ಳವರಾಗಿರುತ್ತಾರೆ.
- ಒಬ್ಬ ಹಿಂದೂ ಪುರುಷನು ಪಿತ್ರಾರ್ಜಿತ ಆಸ್ತಿಯ ತನ್ನ ಪಾಲಿನ ಸಂಬಂಧದಲ್ಲಿ ಉಯಿಲು ಬರೆಯಬಹುದು.
- ಅವನು ತನ್ನ ಪಾಲಿನ ಬಗ್ಗೆ ಉಯಿಲು ಬರೆಯದಿದ್ದರೆ ಅವನ ನಿಧನದ ನಂತರ ಅವನ ಪಾಲಿನ ಆಸ್ತಿಯನ್ನು ಅವನ ಉತ್ತರಾಧಿಕಾರಿಗಳಿಗೆ ಹಂಚಲಾಗುತ್ತದೆ. ಅವನ ಉತ್ತರಾಧಿಕಾರಿಗಳೆಂದರೆ:-

- ಗಂಡು ಮಕ್ಕಳು
- ಹೆಣ್ಣು ಮಕ್ಕಳು
- ಮೃತನ ಹೆಂಡತಿ
- ತಾಯಿ
- ಈ ಮುಂಚೆ ಸತ್ತ ಮಗನ ಮಕ್ಕಳು
- ಈ ಮುಂಚೆ ಮರಣ ಹೊಂದಿರುವ ಮಗಳ ಮಕ್ಕಳು
- ವಿಧವೆ ಸೊಸೆ
- ಈ ಮುಂಚೆ ಮೃತನಾದ ಮಗನ ಮೃತ ಮಗನ ಮಕ್ಕಳು
- ಒಬ್ಬ ಪುರುಷನು ತನ್ನ ಸ್ವಯಾರ್ಜಿತ ಆಸ್ತಿಯ ಬಗೆಗೂ ಉಯಿಲು ಮಾಡಬಹುದು. ಅಂಥ ಸಂದರ್ಭದಲ್ಲಿ ಉಯಿಲಿನಲ್ಲಿ ತಿಳಿಸಲಾದ ವ್ಯಕ್ತಿಗಳಿಗೆ ಆಸ್ತಿಯನ್ನು ಕೊಡಲಾಗುವುದು. ಉಯಿಲು ಮಾಡಿರದಿದ್ದರೆ ಹಿಂದೂ ಪುರುಷನೊಬ್ಬನ ಸ್ವಯಾರ್ಜಿತ ಆಸ್ತಿಯನ್ನು ಮೇಲೆ ತಿಳಿಸಲಾದ ವ್ಯಕ್ತಿಗಳಿಗೆ ಸಮನಾಗಿ ಹಂಚಲಾಗುವುದು.

ಆಶಾ : ಹೌದೇ? ಹಾಗಾದರೆ ನಮ್ಮ ಕುಟುಂಬದ ಪಿತ್ರಾರ್ಜಿತ ಆಸ್ತಿ ಮೂರು ಪಾಲಾಗುವುದು. ಒಂದು ಅಪ್ಪಾಜಿ ಪಾಲು, ಒಂದು ಹಿರಿಯಣ್ಣ ರಾಮನ ಪಾಲು, ಒಂದು ಮಾಧವನ ಪಾಲು. ಅಪ್ಪಾಜಿಯ ಪಾಲಿನಲ್ಲಿ ನಾವುಗಳು, ಅಂದರೆ ಅಮ್ಮ, ಅಜ್ಜಿ, ಅತ್ತಿಗೆ, ಸೋದರ ಮಾವ, ನನ್ನ ತಂಗಿಯರು ಮತ್ತು ನಾನು ಒಂದೊಂದು ಪಾಲು ಪಡೆಯುತ್ತೇವೆ. ಅಲ್ಲವೆ?

ಮಾಲಾ : ಹೌದು, ನಿನ್ನ ಮಾತು ಸರಿ, ಅಪ್ಪಾಜಿಯ ಸ್ವಯಾರ್ಜಿತ ಆಸ್ತಿಯನ್ನೂ ಅದೇ ರೀತಿ ಸಮನಾಗಿ ವಿಭಜಿಸಲಾಗುತ್ತದೆ.

ಆಶಾ : ಆದರೆ ನಾವು ಕೇಳಿರುವಂತೆ ಹೆಣ್ಣು ಮಕ್ಕಳಿಗೆ ತಂದೆ ಆಸ್ತಿಯಲ್ಲಿ ಯಾವುದೇ ಪಾಲು ಇಲ್ಲ. ನನ್ನ ತಂದೆ ನನ್ನ ಮದುವೆಗೆ ಹಣ ಖರ್ಚು ಮಾಡಿರುವುದರಿಂದ ನನಗೆ ಆಸ್ತಿಯಲ್ಲಿ ಹಕ್ಕಿಲ್ಲ ಎಂದು ನನ್ನ ತಮ್ಮನ ವಾದ.

ಮಾಲಾ : ಹಳೆಯ ಕಾನೂನಿನ ಮೇರೆಗೆ ಸ್ತ್ರೀಯರು ಕೇವಲ ಜೀವನಾಂಶವನ್ನು ಪಡೆಯಲು ಹಕ್ಕುಳ್ಳವರಾಗಿದ್ದರು. ಆದರೆ ಈಗ ಅವರಿಗೆ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕು ಇದೆ. ನಿನಗೆ ನಿನ್ನ ಮದುವೆಯ ಸಂದರ್ಭದಲ್ಲಿ ಕೊಟ್ಟ ಹಣ ಅಥವಾ ಉಡುಗೊರೆ ಏನೇ ಇದ್ದರೂ ನೀನು ನಿನ್ನ ಸೋದರರಂತೆಯೇ ನಿನ್ನ ತಂದೆಯ ಆಸ್ತಿಯಲ್ಲಿ ಪಾಲು ಪಡೆಯಲು ಹಕ್ಕುಳ್ಳವಳಾಗಿರುತ್ತಿ.




ಸ್ವಯಾರ್ಜಿತ ಆಸ್ತಿಯನ್ನು ಉತ್ತರಾಧಿಕಾರಿಗಳಿಗೆ ಸಮನಾಗಿ ಹಂಚಲಾಗುವುದು.

ಆಶಾ : ನಮ್ಮ ಪಾಲನ್ನು ನಮ್ಮ ಇಚ್ಛೆಯಂತೆ ಬಳಸಬಹುದೆ?

ಮಾಲಾ : ನಿನ್ನ ಪಾಲು ಸಂಪೂರ್ಣವಾಗಿ ನಿನ್ನ ಆಸ್ತಿ. ನಿನ್ನ ಇಚ್ಛೆಯಂತೆ ನೀನು ಅದನ್ನು ಬಳಸಬಹುದು. 1956ಕ್ಕೆ ಮುಂಚೆ ಮಹಿಳೆಯರು ತಮ್ಮ ಜೀವಿತಕಾಲದಲ್ಲಿ ಆ ಆಸ್ತಿಯ ಉತ್ಪನ್ನಗಳನ್ನು ಮಾತ್ರ ಬಳಸುವ ಹಕ್ಕು ಹೊಂದಿದ್ದರು. ಈಗ ಅವರಿಗೆ ಅವರ ಆಸ್ತಿಯ ಮೇಲೆ ಪೂರ್ಣ ಹಕ್ಕು ಇದೆ. ಈಗ ಅವರು ತಮ್ಮ ಇಚ್ಛಾನುಸಾರ ಅದನ್ನು ಮಾರಬಹುದು, ಉಡುಗೊರೆಯಾಗಿ ನೀಡಬಹುದು ಅಥವಾ ಅದರ ಬಗ್ಗೆ ಉಯಿಲು ಮಾಡಬಹುದು.

ಆಶಾಳ ತಾಯಿ : ಈಗ ನಾವು ವಾಸಿಸುತ್ತಿರುವ ಮನೆ ಏನಾಗುವುದು? ಮಾಧವ ಇಡೀ ಮನೆಯ ಮೇಲೆ ತನ್ನ ಹಕ್ಕು ಸ್ಥಾಪಿಸುತ್ತಿದ್ದಾನೆ. ಅವನು ನಮ್ಮನ್ನು ಹೊರಗೆ ತಳ್ಳಬಹುದೇ.

ಮಾಲಾ : ಇಲ್ಲ ಅವನು ಹಾಗೆ ಮಾಡಲಾರ. ಅಜ್ಜಿ,ತಾಯಿ, ಅತ್ತಿಗೆ ಮತ್ತು ಸೋದರಿಯರಾದ ಗೌರಿ ಮತ್ತು ವಿಮಲಾರಿಗೆ ಈ ಮನೆಯಲ್ಲಿ ವಾಸಿಸುವ ಹಕ್ಕು ಇದೆ. ಕುಟುಂಬದ ಆಸ್ತಿಯಾಗಿ ಮನೆ ಇರುವವರೆಗೂ ತಾಯಿ, ಅಜ್ಜಿ, ಅವಿವಾಹಿತ ಸೋದರಿಯರು, ವಿಧವೆಯರಾದ ಸೋದರಿಯರು ವಿಧವೆಯರಾದ ಸೊಸೆಯರು ಮತ್ತು ನಿರ್ಗತಿಕರಾದ ಸೋದರಿಯರು ಅಲ್ಲೇ ವಾಸಿಸುವ ಹಕ್ಕು ಹೊಂದಿರುತ್ತಾರೆ.

ಆಶಾ : ಹಾಗಾದರೆ ನನಗೆ ಇಲ್ಲಿ ವಾಸಿಸುವ ಹಕ್ಕು ಇಲ್ಲ ಎಂದರ್ಥವೇ ?

ಮಾಧು ಗೌರಿಯನ್ನು ಮನೆಯಿಂದ ಹೊರದೂಡುವುದಾಗಿ ಬೆದರಿಸುತ್ತಾನೆ



ಮಾಲಾ : ಇಲ್ಲ, ಹಕ್ಕು ಎಂಬಂತೆ ನೀನು ಖಾಯಂ ಆಗಿ ಈ ಮನೆಯಲ್ಲಿ ವಾಸಿಸಲಾರೆ. ನಿನ್ನ ತಾಯಿ ಮತ್ತು ಕುಟುಂಬದ ಸದಸ್ಯರನ್ನು ಭೇಟಿಯಾಗಲು ನಿನಗೆ ಖಂಡಿತವಾಗಿಯೂ ಹಕ್ಕು ಇದೆ. ಆದರೆ ಮನೆಯನ್ನು ಮಾರಿದಾಗ ನೀನು ನಿನ್ನ ತಂದೆಯ ಪಾಲಿನ ಸ್ವಲ್ಪ ಹಣವನ್ನು ಪಡೆಯುತ್ತಿ.

ಆಶಾಳ ತಾಯಿ : ನಾವು ವಾಸಿಸುತ್ತಿರುವಾಗಲೇ ಮಾಧವ ಈ ಮನೆಯನ್ನು ಮಾರಬಹುದೆ?

ಮಾಲಾ : ಹೌದು ಅವನು ಮನೆಯನ್ನು ಮಾರಬಹುದು. ನೀವೆಲ್ಲ ಮಾರಾಟದಿಂದ ಬಂದ ಹಣದಲ್ಲಿ ಪಾಲು ಪಡೆಯುತ್ತೀರಿ.

ಗೌರಿ : ನಾನೊಬ್ಬ ವಿಧವೆ ಮಗಳು. ನಾನು ಬೇರೆ ಕುಟುಂಬಕ್ಕೆ ಸೇರಿದವಳೆಂದು ಮಾಧವ ಹೇಳುತ್ತಾನೆ. ಅವನು ನನ್ನನು ಮನೆಯಿಂದ ಹೊರದೂಡಬಹುದೆ ?

ಮಾಲಾ : ಇಲ್ಲ ಅವನು ಹಾಗೆ ಮಾಡಲು ಯತ್ನಿಸಿದರೆ ನೀನು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಬೇಕು. ಆಗ ನ್ಯಾಯಾಲಯವು ನಿನ್ನನ್ನಾಗಲೀ ಅಥವಾ ಕುಟುಂಬದ ಇತರ ಹೆಂಗಸರನ್ನಾಗಲಿ ಮನೆಯಿಂದ ಹೊರದೂಡದಂತೆ ಮಾಧವನನ್ನು ತಡೆಯುತ್ತದೆ. ಅವನು ಹಾಗೆ ಮಾಡಲು ಪ್ರಯತ್ನಿಸಿದರೆ ನೀನು ನನಗೆ ತಿಳಿಸು. ನಾನು ನಿನಗೆ ಸಹಾಯ ಮಾಡುತ್ತೇನೆ.



ಅಮ್ಮ : ಮಾಧವ ಹೀಗೆಯೇ ನಮಗೆ ತೊಂದರೆ ಕೊಡುತ್ತಲೇ ಇರುತ್ತಾನೆಂದು ನನ್ನ ಅನಿಸಿಕೆ. ಆದ್ದರಿಂದ ಮನೆಯನ್ನು ವಿಭಾಗ ಮಾಡಬೇಕೆಂದು ಕೇಳುವುದು ಒಳಿತು. ನಾವು ಹೆಂಗಸರು ನಮ್ಮ ಪಾಡಿಗೆ ಪ್ರತ್ಯೇಕವಾಗಿ ಇರುತ್ತೇವೆ.

ಮಾಲಾ : ವಾಸದ ಮನೆಯನ್ನು ವಿಭಾಗ ಮಾಡಬೇಕೆಂದು ಕುಟುಂಬದ ಯಾವ ಹೆಂಗಸೂ ಕೇಳುವಂತಿಲ್ಲ. ಗಂಡಸು ಪಾಲು ಮಾಡುವಂತೆ ಕೇಳಿದರೆ ಮಾತ್ರ ಮನೆಯನ್ನು ಪಾಲು ಮಾಡಬಹುದು.

ಆಶಾ : ಕಡೆಯದಾಗಿ ಒಡವೆಗಳ ಬಗ್ಗೆ ನಿನ್ನನ್ನು ಕೇಳಬೇಕಾಗಿದೆ. ನನ್ನ ಅಜ್ಜಿ, ತಾಯಿ, ಅತ್ತಿಗೆ ಮತ್ತು ಗೌರಿಯ ಒಡವೆಗಳು ಕುಟುಂಬಕ್ಕೆ ಸೇರಿದವುಗಳಾಗಿರುವುದರಿಂದ ಅವುಗಳನ್ನು ತನಗೆ ಒಪ್ಪಿಸಬೇಕೆಂದು ಮಾಧವ ಹೇಳುತ್ತಾನೆ. ಇದು ನಿಜವೇ ?

ಮಾಲಾ : ಇಲ್ಲ ಹೆಂಗಸರಿಗೆ ಅವರ ಜೀವಿತ ಕಾಲದಲ್ಲಿ ನೀಡಲಾದ ಎಲ್ಲ ಒಡವೆಗಳು, ಉಡುಗೊರೆಗಳು ಆಕೆಯ ಸ್ತ್ರೀ ಧನವೆಂದು ಪರಿಗಣಿಸಲಾಗುತ್ತದೆ. ಅದು ಅವಳಿಗೆ ಮಾತ್ರವೇ ಸೇರುತ್ತವೆ. ಅವಳು ಅಂಥ ಸ್ತ್ರೀ ಧನದ ಏಕಮಾತ್ರ



ಪುರುಷನು ಮಾತ್ರ ಪಿತ್ರಾರ್ಜಿತವಾದ ಮನೆ ವಿಭಾಗವಾಗಬೇಕೆಂದು ಕೇಳಬಹುದು




ಒಡತಿಯಾಗಿದ್ದು ಅದನ್ನು ತನ್ನ ಇಚ್ಛಾನುಸಾರ ಬಳಸಬಹುದು. ಅಂಥ ಒಡವೆಗಳನ್ನು ಕುಟುಂಬದ ಆಸ್ತಿಯೊಡನೆ ವಿಭಾಗ ಮಾಡಬಾರದು. ನಿಮ್ಮ ತಂದೆಯ ಸ್ವತ್ತನ್ನು ಮಾತ್ರ ಪಾಲು ಮಾಡಬಹುದೇ ಹೊರತು ಇನ್ನಾವ ಸದಸ್ಯನಿಗೆ ಸೇರಿದ ಸ್ವತ್ತನ್ನಲ್ಲ.

ಆಶಾಳ ತಾಯಿ : ಆಶಾಳ ತಂದೆ ಉಯಿಲು ಮಾಡಿದ್ದರೆ ನಮಗೆ ಹೆಚ್ಚಿಗೆ ಪಾಲು ಸಿಗುತ್ತಿತ್ತೆ ?

ಮಾಲಾ : ಅದು ಉಯಿಲಿನಲ್ಲಿ ಏನು ಬರೆದಿದೆ ಎಂಬುದನ್ನು ಅವಲಂಬಿಸುತ್ತದೆ. ಉಯಿಲಿನಲ್ಲಿ ಒಬ್ಬ ವ್ಯಕ್ತಿಯು ತನ್ನ ಯಾವುದೇ ಆಸ್ತಿಯನ್ನು ಯಾರಿಗಾದರೂ ನೀಡಬಹುದು. ಉಯಿಲಿನಲ್ಲಿ ಉಲ್ಲೇಖ ಇಲ್ಲದ ವ್ಯಕ್ತಿಗಳು ಪಾಲನ್ನು ಕೇಳುವಂತಿಲ್ಲ.

ಆಶಾ : ಹೌದೇ ? ನನ್ನ ಸ್ನೇಹಿತೆ ಮೀನಾಳ ತಂದೆ ತಮ್ಮ ಎಲ್ಲ ಆಸ್ತಿಯನ್ನು ಸೊಸೆಯ ಹೆಸರಿನಲ್ಲಿ ಬಿಟ್ಟು ಹೋದರು. ತಮ್ಮ ಮಗ ಕುಡುಕ ಹಾಗೂ ಅಪ್ರಯೋಜಕನಾಗಿರುವುದರಿಂದ ತನ್ನ ತಾಯಿ, ಹೆಂಡತಿ ಮತ್ತು ಮಕ್ಕಳನ್ನು ನೋಡಿಕೊಳ್ಳುವುದಿಲ್ಲವೆಂದು ಅವರು ಭಾವಿಸಿರಬಹುದು.




ಮಾಲಾ : ಹೌದು ಉಯಿಲು ಮಾಡುವಾಗ ಆಸ್ತಿ ಯೋಗ್ಯರಾದವರ ಕೈ ಸೇರುವಂತೆ ಸಂಬಂಧಪಟ್ಟ ವ್ಯಕ್ತಿಯು ಎಚ್ಚರವಹಿಸಬೇಕು.

ಆಶಾಳ ಅಜ್ಜಿ : ಸ್ತ್ರೀಯೂ ಉಯಿಲು ಮಾಡಬಹುದೇ ?

ಮಾಲಾ : ಖಂಡಿತವಾಗಿಯೂ. ಪ್ರತಿಯೊಬ್ಬರೂ, ಸ್ತ್ರೀಯಾಗಲೀ, ಪುರುಷನಾಗಲೀ ತನ್ನ ಆಸ್ತಿಯ ಬಗ್ಗೆ ಉಯಿಲು ಮಾಡುವ ಹಕ್ಕು ಹೊಂದಿರುತ್ತಾರೆ.

ಆಶಾಳ ತಾಯಿ: ಒಬ್ಬ ಮಹಿಳೆ ಉಯಿಲು ಬರೆದಿಡದಿದ್ದರೆ, ಅವಳ ಮರಣಾನಂತರ ಅವಳ ಆಸ್ತಿಯ ಗತಿ ಏನು ?

ಮಾಲಾ : ಒಬ್ಬ ಹಿಂದು ಮಹಿಳೆ ಉಯಿಲು ಬರೆದಿಡದೆ ಮೃತಳಾದರೆ ಅವಳ ಆಸ್ತಿಯನ್ನೂ ಕಾನೂನು ರೀತ್ಯ ಅವಳ ಉತ್ತರಾಧಿಕಾರಿಗಳಿಗೆ ಹಂಚಲಾಗುವುದು. ಒಬ್ಬ ಸ್ತ್ರೀಯರ ಉತ್ತರಾಧಿಕಾರಿಗಳೆಂದರೆ ಅವಳ ಪುತ್ರರು, ಪುತ್ರಿಯರು ಪತಿ ಮತ್ತು ಅವಳಿಗಿಂತ ಮುಂಚೆ ಅವಳ ಮಗ ಅಥವಾ ಮಗಳು ಮೃತರಾಗಿದ್ದರೆ ಅವರ ಮಕ್ಕಳು. ಇಂಥ ಸಂಬಂಧಿಕರಾರೂ ಇಲ್ಲದಿದ್ದರೆ ಅವಳ ಆಸ್ತಿಯು ಅವಳ ಉತ್ತರಾಧಿಕಾರಿಗಳಿಗೆ ಹೋಗುತ್ತದೆ.

# ಉಯಿಲನ್ನು ಬರೆಯುವುದು ಹೇಗೆ ?

- ನಿಮ್ಮ ಪೂರ್ಣ ಹೆಸರು ಬರೆಯಿರಿ
- ನಿಮ್ಮ ತಂದೆಯ ಅಥವಾ ಪತಿಯ ಹೆಸರು ಬರೆಯಿರಿ
- ನಿಮ್ಮ ಪೂರ್ಣ ವಿಳಾಸ ಬರೆಯಿರಿ
- ನಿಮ್ಮ ಆಸ್ತಿಯ ಬಗ್ಗೆ ವಿವರವಾಗಿ ಬರೆಯಿರಿ.
- ನಿಮ್ಮ ಆಸ್ತಿಯನ್ನು ಯಾರಿಗೆ ಕೊಡಲು ಇಚ್ಚಿಸುವಿರೋ ಅವರ ಹೆಸರು ಮತ್ತು ವಿಳಾಸಗಳನ್ನು ಸ್ಪಷ್ಟವಾಗಿ ಬರೆಯಿರಿ.
- ನೀವು ಮನಃಪೂರ್ವಕವಾಗಿ ಮತ್ತು ಪ್ರಜ್ಞಾಪೂರ್ವಕವಾಗಿ ಉಯಿಲನ್ನು ಬರೆದಿರುವಿರೆಂಬುದನ್ನು ತಿಳಿಸಿರಿ.
- ಉಯಿಲನ್ನು ಬರೆದ ದಿನಾಂಕವನ್ನು ಬರೆಯಿರಿ. ಉಯಿಲಿನ ಮೇಲೆ ನಿಮ್ಮ ಸಹಿ ಹಾಕಿರಿ.
- ಉಯಿಲಿಗೆ ಇಬ್ಬರು ಸಾಕ್ಷಿಗಳು ಸಹಿ ಮಾಡಬೇಕು. ಅವರ ಹೆಸರು ಮತ್ತು ವಿಳಾಸಗಳನ್ನು ಬರೆಯಬೇಕು.

ನೆನಪಿಡಿ. ಉಯಿಲನ್ನು ಬರೆದ ವ್ಯಕ್ತಿಯ ಮರಣಾನಂತರವೇ ಆ ಉಯಿಲು ಜಾರಿಗೆ ಬರುತ್ತದೆ. ಉಯಿಲನ್ನು ಬರೆದಿರುವುದರಿಂದಾಗಿ ಆಸ್ತಿ ಬೇರೆ ಯಾರ ವಶಕ್ಕೂ ಹೋಗುವುದಿಲ್ಲ. ಉಯಿಲನ್ನು ಸಾಮಾನ್ಯ ಹಾಳೆಯ ಮೇಲೆ ಬರೆಯಬಹುದು. ಉಯಿಲು ನೋಂದಣಿಯಾಗಬೇಕಾದ ಅಗತ್ಯವಿಲ್ಲ. ಆದರೆ ನೋಂದಾಯಿತ ಉಯಿಲು ಕಳೆದುಹೋಗುವುದಿಲ್ಲ ಅಥವಾ ಅದನ್ನು ತಿದ್ದಲು ಸಾಧ್ಯವಿಲ್ಲ.

## ಜೀವನಾಂಶ ಪಡೆಯಲು ಪತ್ನಿಗಿರುವ ಹಕ್ಕು

ಒಬ್ಬ ಹಿಂದೂ ವಿವಾಹಿತಳು ತನ್ನನ್ನು ತಾನು ನೋಡಿಕೊಳ್ಳಲು ಅಸಮರ್ಥಳಾಗಿದ್ದರೆ ಜೀವನ ನಿರ್ವಹಣೆಯ ಖರ್ಚಿಗಾಗಿ ಪತಿಯಿಂದ ಹಣ ಪಡೆಯುವ ಹಕ್ಕು ಆಕೆಗಿದೆ. **ಹಿಂದು ದತ್ತು ಮತ್ತು ಜೀವನಾಂಶ ಅಧಿನಿಯಮ, 1956** ಎಂಬ ಕಾನೂನು ಈ ಹಕ್ಕನ್ನು ನೀಡುತ್ತದೆ.

ಯಾವುದೇ ಸೂಕ್ತ ಕಾರಣಕ್ಕಾಗಿ ಒಬ್ಬ ಹೆಂಡತಿ ಗಂಡನಿಂದ ಪ್ರತ್ಯೇಕವಾಗಿ ಉಳಿದರೆ ಆಗಲೂ ಅವಳಿಗೆ ಪತಿಯಿಂದ ಜೀವನಾಂಶ ಪಡೆಯುವ ಹಕ್ಕಿದೆ.

ಸೂಕ್ತ ಕಾರಣ ಯಾವುವೆಂದರೆ:

- ಪತಿಯಿಂದ ಪರಿತ್ಯಕ್ತಳಾಗಿರುವುದು
- ಪತಿಯ ಹಿಂಸೆಯಿಂದುಂಟಾದ ಭಯ
- ಪತಿ ಕುಷ್ಠರೋಗಿಯಾಗಿರುವುದು
- ಪತಿಗೆ ಇನ್ನೊಬ್ಬ ಜೀವಂತ ಪತ್ನಿ ಇರುವುದು
- ಪತಿಯು ಇನ್ನೊಬ್ಬಳೊಡನೆ ಅನೈತಿಕ ಸಂಬಂಧ ಹೊಂದಿರುವುದು
- ಪತಿಯ ಮತಾಂತರ

ಪತ್ನಿಯು ವ್ಯಭಿಚಾರಿಣಿಯಾಗಿದ್ದರೆ ಅಥವಾ ಮತಾಂತರ ಹೊಂದಿದ್ದರೆ ಅವಳು ಜೀವನಾಂಶಕ್ಕೆ ಹಕ್ಕುಳ್ಳವಳಾಗುವುದಿಲ್ಲ.

## ಜೀವನಾಂಶವನ್ನು ಪಡೆಯಲು ಮಕ್ಕಳಿಗೆ ಮತ್ತು ವೃದ್ಧ ಹಾಗೂ ದುರ್ಬಲ ತಾಯ್ತಂದೆಯರಿಗೆ ಇರುವ ಹಕ್ಕು

**(ಹಿಂದೂ ದತ್ತು ಮತ್ತು ಜೀವನಾಂಶ ಅಧಿನಿಯಮ, 1956)**

- ಕಾನೂನು ಸಮ್ಮತ ಮತ್ತು ಕಾನೂನು ಬಾಹಿರವಾದ ಅಪ್ರಾಪ್ತ ವಯಸ್ಸಿನ ಮಕ್ಕಳು ತಮ್ಮ ತಾಯ್ತಂದೆಯರಿಂದ ಜೀವನಾಂಶವನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
- ವೃದ್ಧ ಅಥವಾ ದುರ್ಬಲ ತಾಯ್ತಂದೆಯರು ತಮ್ಮ ಮಕ್ಕಳಿಂದ (ಪುತ್ರರು ಅಥವಾ ಪುತ್ರಿಯರು) ಜೀವನಾಂಶವನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

ತಮ್ಮ ಸ್ವಂತ ವರಮಾನ ಅಥವಾ ತಮ್ಮ ಆಸ್ತಿಯಿಂದ ಬರುವ ವರಮಾನದಿಂದ ತಮ್ಮನ್ನು ತಾವು ಪೋಷಿಸಿಕೊಳ್ಳಲು ಅಸಮರ್ಥರಾದವರು ಜೀವನಾಂಶವನ್ನು ಕೇಳಲು ಹಕ್ಕುಳ್ಳವರಾಗಿರುತ್ತಾರೆ.

## ಜೀವನಾಂಶವನ್ನು ಪಡೆಯಲು ವಿಧವೆಗಿರುವ ಹಕ್ಕು
## (ಹಿಂದೂ ದತ್ತು ಮತ್ತು ಜೀವನಾಂಶ ಅಧಿನಿಯಮ, 1956)

ಒಬ್ಬ ಹಿಂದೂ ವಿಧವೆಯು ತನ್ನ ವರಮಾನದಿಂದ ಅಥವಾ ಆಸ್ತಿಯಿಂದ ತನ್ನನ್ನು ತಾನು ಪೋಷಿಸಿಕೊಳ್ಳಲು ಅಸಮರ್ಥಳಿದ್ದರೆ ಅವಳು ಈ ಮುಂದಿನವರಿಂದ ಅದನ್ನು ಪಡೆಯಬಹುದು.:-

- ಪತಿಯ ಆಸ್ತಿಯಿಂದ ಅಥವಾ ತನ್ನ ತಾಯ್ತಂದೆಯರಿಂದ
- ಆಕೆಯ ಪುತ್ರರು ಅಥವಾ ಪುತ್ರಿಯರಿಂದ ಅಥವಾ ಅವರ ಆಸ್ತಿಯಿಂದ

- ಜೀವನಾಂಶವನ್ನು ಪಡೆಯಲು ಹಕ್ಕುಳ್ಳವಳಾಗಿರುತ್ತಾಳೆ.

ಮೇಲೆ ತಿಳಿಸಲಾದ ವ್ಯಕ್ತಿಗಳು ಅವಳನ್ನು ಪೋಷಿಸದಿದ್ದರೆ ಅವಳು ತನ್ನ ಮಾವನಿಂದ ಜೀವನಾಂಶವನ್ನು ಪಡೆಯಲು ಹಕ್ಕುಳ್ಳವಳಾಗುತ್ತಾಳೆ.

ಅವಳ ಮರುಮದುವೆಯಾದರೆ ಅವಳು ಮಾವನಿಂದ ಜೀವನಾಂಶವನ್ನು ಪಡೆಯುವ ಹಕ್ಕು ಕಳೆದುಕೊಳ್ಳುತ್ತಾಳೆ.

**ಜೀವನಾಂಶಕ್ಕಾಗಿ ಅರ್ಜಿಯನ್ನು** ಸಿವಿಲ್ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಇದಲ್ಲದೆ ಅಥವಾ ಇದರೊಂದಿಗೆ, ದಂಡ ಪ್ರಕ್ರಿಯಾ ಸಂಹಿತೆಯ 125ನೇ ಪ್ರಕರಣದಡಿಯಲ್ಲಿ ಕ್ರಿಮಿನಲ್ ನ್ಯಾಯಾಲಯಕ್ಕೂ ಅರ್ಜಿ ಸಲ್ಲಿಸಬಹುದು.

ಒಬ್ಬ ಮಹಿಳೆಯು ತನ್ನನ್ನು ತಾನು ಪೋಷಿಸಿಕೊಳ್ಳಲು ಅಸಮರ್ಥಳಾದರೆ ಅವಳು ಜೀವನಾಂಶಕ್ಕಾಗಿ **ದಂಡ ಪ್ರಕ್ರಿಯಾ ಸಂಹಿತೆಯ 125**ನೇ ಪ್ರಕರಣದ ಅಡಿಯಲ್ಲಿ ಕ್ರಿಮಿನಲ್ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕು. ಕ್ರಿಮಿನಲ್ ನ್ಯಾಯಾಲಯದಲ್ಲಿ ವ್ಯವಹರಣೆಗಳು ಸಿವಿಲ್ ನ್ಯಾಯಾಲಯಕ್ಕಿಂತ ತ್ವರಿತವಾಗಿ ಜರುಗುತ್ತವೆ.

ಒಬ್ಬ ಮಹಿಳೆ ತನ್ನ ಪತಿ, ತಂದೆ ಅಥವಾ ಮಗನಿಂದ ಜೀವನಾಂಶವನ್ನು ಕೇಳಬಹುದು. ಅವಳು ಅರ್ಜಿ ಸಲ್ಲಿಸಿದಾಗ, ನ್ಯಾಯಾಲಯವು ಪ್ರತಿ ತಿಂಗಳು ಅವಳಿಗೆ ಒಂದು ನಿಗದಿತ ಮೊತ್ತದ ಹಣವನ್ನು ನೀಡಬೇಕೆಂದು ಆದೇಶಿಸುತ್ತದೆ. ಈ ಹಣ ತಿಂಗಳೊಂದಕ್ಕೆ 500 ರೂ.ಗಳನ್ನು ಮೀರಬಾರದು.

**ಈ ಅರ್ಜಿಯನ್ನು ಎಲ್ಲಿ ಸಲ್ಲಿಸಬೇಕು ?**

ಈ ಅರ್ಜಿಯನ್ನು ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟ್ ನ್ಯಾಯಾಲಯದಲ್ಲಿ ಸಲ್ಲಿಸಬೇಕು.

## ಈ ಮಾಲಿಕೆಯಲ್ಲಿ

'ನಮ್ಮ ಕಾನೂನುಗಳು' ಮಹಿಳೆಯರಿಗೆ ಸಾಮಾನ್ಯವಾಗಿ ಅನ್ವಯಿಸುವ ಕಾನೂನುಗಳ ಬಗ್ಗೆ ಸರಳರೀತಿಯಲ್ಲಿ ತಿಳುವಳಿಕೆ-ನೀಡುವ ಹತ್ತು ಪುಸ್ತಿಕೆಗಳ ಒಂದು ಮಾಲಿಕೆಯಾಗಿದೆ. ಈ ಮಾಲಿಕೆಯಲ್ಲಿ, ಕೆಳವರ್ಗದ ಹೆಂಗಸರು, ಅದರಲ್ಲೂ ನವ ಸಾಕ್ಷರ ಮಹಿಳೆಯರು, ಬಳಸಲಿಕ್ಕೆ ಸಾಧ್ಯವಾಗಲಿ ಎನ್ನುವ ಉದ್ದೇಶದಿಂದ ನಿರೂಪಣೆಯನ್ನು ಸಾಧ್ಯವಾದಷ್ಟೂ ಸರಳವಾಗಿ, ಸಂಕ್ಷಿಪ್ತವಾಗಿ, ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ, ಉಪಮೆಗಳನ್ನ, ಉದಾಹರಣೆಗಳನ್ನ ನೀಡಿ ರಚಿಸಲಾಗಿದೆ. ಯಾರಿಗೆ ಈ ಕಾನೂನುಗಳು ತೀರ ಅವಶ್ಯಕವಿದೆಯೋ ಅಂತಹವರನ್ನ ಈ ಪುಸ್ತಿಕೆಗಳು ತಲುಪಬೇಕೆಂದು ನಮ್ಮ ಆಶಯ. ಈ ಹತ್ತು ಪುಸ್ತಕಗಳು ಕಾನೂನಿನ ಸಮಗ್ರ ಪಾಠವೇನಲ್ಲ. ಒಟ್ಟಾರೆಯಾಗಿ ಮಹಿಳೆಯರಿಗೆ ತಮ್ಮ ನಾಗರೀಕ ಹಕ್ಕುಗಳ ಅರಿವಾಗಲಿ, ಅವರು ಆತ್ಮವಿಶ್ವಾಸದಿಂದ ಹಾಗೂ ಸಂದಿಗ್ಧರಹಿತ ರೀತಿಯಲ್ಲಿ ತಮ್ಮ ಸಮಸ್ಯೆಗಳಿಗೆ ತಾವೇ ಧ್ವನಿಕೊಡುವಂತಾಗಲಿ ಎಂದು ಈ ಮಾಲಿಕೆ ಬಯಸುತ್ತದೆ.

ಈ ಪುಸ್ತಿಕೆಗಳ ಹಿಂದಿ ಅನುವಾದದಲ್ಲಿ, ಈಗಾಗಲೇ ಅವುಗಳನ್ನ, ಗ್ರಾಮೀಣ ಮಹಿಳೆಯರ ಕಾರ್ಯಾಗಾರಗಳಲ್ಲಿ ಬಳಸಿ, ಇವುಗಳ ಪರಿಣಾಮವನ್ನ ಪರೀಕ್ಷಿಸಲಾಗಿದೆ. ಹಲವು ಸಾಮಾಜಿಕ ಕಾರ್ಯಕರ್ತರುಗಳೊಡನೆ, ಕಾನೂನು ತಜ್ಞರುಗಳೊಡನೆ, ನಡೆಸಿದ ಕಾರ್ಯಾಗಾರಗಳಲ್ಲಿ ಕೂಡ ಇವುಗಳ ಬಳಕೆ ಹಾಗೂ ಪರೀಕ್ಷೆ ಆಗಿದೆ. ಆಗ ಬಂದ ಅಭಿಪ್ರಾಯಗಳನ್ನ ಮನನ ಮಾಡಿ ಪುಸ್ತಿಕೆಗಳನ್ನ ತಿದ್ದಿ ಪ್ರಕಟಿಸಲಾಗಿದೆ.

ಈಗ ಕನ್ನಡದಲ್ಲಿ **'ನಮ್ಮ ಕಾನೂನುಗಳು'** ನಿಮ್ಮ ಕೈಸೇರುತ್ತಿದೆ. ಮೇಲೆ ಹೇಳಿದ ಆಶಯಗಳನ್ನ ಗಮನದಲ್ಲಿಟ್ಟುಕೊಂಡು, ಇಲ್ಲಿ ಸಲ್ಲುವ ಉಪಮೆಗಳು, ಉದಾಹರಣೆಗಳನ್ನ, ಬಳಸಿಕೊಂಡು ಹೆಗ್ಗೋಡಿನ **ಕವಿಕಾವ್ಯ ಟ್ರಸ್ಟಿನವರು** ಕನ್ನಡ ಅವತರಣಿಕೆಯನ್ನ ಸಿದ್ಧಗೊಳಿಸಿದ್ದಾರೆ. **ಯುನಿಸೆಫ್** ಸಂಸ್ಥೆಯ ಉದಾರ ನೆರವಿನಿಂದಾಗಿ ಇದರ ಪ್ರಕಟಣೆ ಸಾಧ್ಯವಾಗುತ್ತಿದೆ. ಈ ಪುಸ್ತಕಗಳ ಪ್ರಯೋಜನವನ್ನ, ನವಸಾಕ್ಷರ ಮಹಿಳೆಯರು, ದುಡಿಯುವ ಮಹಿಳೆಯರ ಸಂಘಟನೆಗಳು, ಅಂಗನವಾಡಿ ಕಾರ್ಯಕರ್ತೆಯರು, ಪಂಚಾಯತಿ ಹಾಗೂ ತಾಲ್ಲೂಕು ಮಟ್ಟದ ಅಧಿಕಾರಿಗಳು, ಆರೋಗ್ಯ ಕಾರ್ಯಕರ್ತರು, ಶಾಲಾ ಅಧ್ಯಾಪಕರುಗಳು, ಸಾಕ್ಷರತಾ ಕಾರ್ಯಕರ್ತರು, ಹಾಗೂ 'ಡ್ವಾಕ್ರ' ಗುಂಪುಗಳು, ಪಡೆಯಬೇಕೆಂಬ ಉದ್ದೇಶದಿಂದ ಕರ್ನಾಟಕ ರಾಜ್ಯಮಹಿಳಾ ಅಬಿವೃದ್ಧಿ ನಿಗಮ, ವ್ಯಾಪಕ ರೀತಿಯಲ್ಲಿ ಅವುಗಳನ್ನ ಜನತೆಗೆ ತಲುಪಿಸಲು ಏರ್ಪಾಡುಮಾಡಿದೆ.


**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ**

16ನೆಯ ಮಹಡಿ, ಬಹುಪಯೋಗಿ ಕಟ್ಟಡ, ಮಹಾತ್ಮಗಾಂಧಿ ರಸ್ತೆ

ಬೆಂಗಳೂರು : 560001, ಫೋ: 5587418, 5588250

**ಮೂಲ ಪ್ರಕಾಶಕರು**

**ಮಾರ್ಗ್**

113-ಎ, ಶಾಪುರ್ ಜಾಟ್, ಎಷಿಯಾಡ್ ಗ್ರಾಮದ ಸಮೀಪ

ನವದೆಹಲಿ-110016, ಫೊ : 6467463.